

# ಅಂತರಂಗ




ವಿಶೇಷ ತರದ ಕನ್ನಡ ವಾರಪತ್ರಿಕೆ.
ಮನಿಪಳ, ಉಡುಪಿ

ಸಂಪುಟ ೧.

೧೪ ಅಗೋಸ್ತು ೧೯೩೮
ಆದಿತ್ಯವಾರ.

ಸಂಚಿಕೆ ೫.







ಮಾಲಕರು ಮುದ್ರಕರು ಮ ಪ್ರಕಾಶಕರು:

**ಸಪ್ಲೈ ಏಜೆನ್ಸಿ ಲಿಮಿಟೆಡ್ ಉಡುಪಿ.**

ಮುದ್ರಣ ಮ ಪ್ರಕಟನ ಸ್ಥಳ:
ಮನಿಪಳ ಪವರ್ ಪ್ರೆಸ್,
ಮನಿಪಳ, ಉಡುಪಿ.

ANNUAL SUBSCRIPTION
RS. 3—0—0.

SINGLE COPY
Re: 0—1—0

# ನಮ್ಮಲ್ಲಿ

## - ಕನ್ನಡ ಪುಸ್ತಕಗಳು -

| | | | | |
|---|---|---|---|---|
| ಶಾಂತಿ ಪುರಾಣ | | 3 | 0 | 0 |
| ಚಂದ್ರಗುಪ್ತ ಚಕ್ರವರ್ತಿ | | 1 | 0 | 0 |
| ಸರಸ್ವತೀ (ಸಾಮಾಜಿಕ ನಾಟಕ) | | 0 | 8 | 0 |
| ಒಂದೇ ತಿಂಗಳಲ್ಲಿ ಇಂಗ್ಲಿಷ್ (ಇಂಗ್ಲಿಷ್ ಸ್ವಯಂಬೋಧಿನಿ) | | 0 | 8 | 0 |
| ಸಾಮುದ್ರಿಕ ಶಾಸ್ತ್ರ | | 0 | 8 | 0 |
| ಹೊಂದೊವಲ ಹಂಬಲು. | | 0 | 6 | 0 |
| ವೀರಭೂಮಿ (ಕತೆ) | | 0 | 1 | 6 |
| ಗೀತೆಯ ಕೈಗನ್ನಡಿ | | 0 | 4 | 0 |
| ಗೀತೆಯ ಹೂಲ (ಈಶಾವಾಸ್ಯೋಪನಿಷತ್ತಿನ ಭಾಷಾಂತರ) | | 0 | 1 | 0 |
| ಸ್ತ್ರೀಪದ್ಯರತ್ನಾಕರ ಭಾಗ | I | 0 | 1 | 0 |
| ಡಿ | II | 0 | 1 | 0 |
| ಡಿ | III | 0 | 1 | 0 |
| ಡಿ | IV | 0 | 1 | 0 |
| ಪುರಂದರ ದಾಸರ ಪದ ಭಾಗ | I | 0 | 4 | 0 |
| ಡಿ | II | 0 | 4 | 0 |
| ಡಿ | III | 0 | 4 | 0 |
| ಮಧುವನ | | 1 | 8 | 0 |
| ಧರ್ಮಸಂಕಟ (ಸಾಮಾಜಿಕ ನಾಟಕ) | | 0 | 4 | 0 |
| (Gouthama the Buddha) | | 0 | 8 | 0 |
| ಭಗವದ್ಗೀತೆ | | 0 | 2 | 0 |
| ಕುಕ್ಕುಟ ಪಂಚಾಂಗ | | 0 | 1 | 0 |
| ಮಗ್ಗಿ | | 0 | 1 | 6 |
| ತುಳುನಾಡ್ ತಿಲಕ ಪಂಚಾಂಗ | | 0 | 1 | 0 |
| ವೈಜಯಂತೀ ಪಂಚಾಂಗ | | 0 | 2 | 6 |
| ಜಯಪಾಂಡ್ಯ ವಿಜಯ | | 0 | 2 | 0 |

## - ತುಳು ಪುಸ್ತಕಲು -

| | | | |
|---|---|---|---|
| ಕೃಷ್ಣಸಂಧಾನ (ಪ್ರಸಂಗ) (ಕನ್ನಡ ಕೃಷ್ಣಸಂಧಾನವನ್ನೊಳಗೊಂಡಿದೆ.) | 0 | 8 | 0 |
| ಬಲೀಂದ್ರ (ಕತೆ) (ವಿಮರ್ಶಾತ್ಮಕ ಲೇಖನ) | 0 | 2 | 0 |
| ಅಳಿಯ ಸಂತಾನ ಕಟ್ಟದ ಗುಟ್ಟು. | 0 | 4 | 0 |
| ಕಾನಿಗೆ (ಪದ್ಯ) | 0 | 4 | 0 |
| ತುಳುವ್ಯಾಕರಣ | 0 | 8 | 0 |
| ಜನಮರ್ಲ್ (ನಾಟಕ) | 0 | 6 | 0 |
| ಮದ್ಮಾಳತ್ತ್ ಮದ್ಮಾಯೆ (ಕತೆ) | 0 | 2 | 0 |
| ಬಂಗಾರ್‌ದಂಗಿದ ಕತೆ | 0 | 1 | 0 |
| ಪದ್ಯಮಾಲಿಕೆ | 0 | 1 | 0 |
| ಮಿತ್ಯನಾರಾಯಣ ಕತೆ. | 0 | 8 | 0 |
| ಸತೀ ಕಮಲೆ (ನಾವೆಲ್) | 0 | 6 | 0 |
| ಕನ್ಯೋಪದೇಶ | 0 | 2 | 0 |
| ಕನ್ನಡಕೊ | 0 | 0 | 6 |
| ವಾಲಿಸುಗ್ರೀವರ ಕಾಳಗ. | 0 | 3 | 0 |
| ಬೊಬ್ಬರ್ಯ (ಪಾಡ್ದನ) | 0 | 2 | 0 |
| ತೊಡಕಿನಾರ್ ,, | 0 | 2 | 0 |
| ಮುಂಡತ್ತಾಯ ,, | 0 | 2 | 0 |
| ವಿಶ್ವರೂಪ ದರ್ಶನ (ಗೀತೆಯ II ನೇ ಅಧ್ಯಾಯದ ಪದ್ಯಾತ್ಮಕ ಭಾಷಾಂತರ) | 0 | 1 | 0 |
| ಭಗವದ್ಗೀತೆ | 0 | 5 | 6 |

**ತುಳುನಾಡ್ ಪ್ರೆಸ್,**

**ಉಡುಪಿ, ದ. ಕ.**

# ಅಂತರಂಗ

## ಅರಸಿ-ಆರಿಸಿದ್ದು

ಮುಸ್ಲಿಮ್ ಲೀಗ್ ಹಿಂದುಸ್ಥಾನದ ಮುಸಲ್ಮಾನರ ಏಕ ಮಾತ್ರ ಪಕ್ಷವೆಂದು ಕಾಂಗ್ರೆಸ್ ಮಂಜೂರುಮಾಡಲೊಪ್ಪದಿರುವುದಕ್ಕಾಗಿ ಜಾಗ್ರತೆಯಲ್ಲಿರಬೇಕಾಗಿದೆ! ಮುಸ್ಲಿಮ್ ಲೀಗಿನ "ಪ್ವೊಂಟ್ಸ್ ಫ್ಯಾಕ್ಟರಿ"ಯಲ್ಲಿ ಸಿಕ್ಕುಬಟ್ಟೆ ಪ್ವೊಂಟ್‌ಗಳು ತಯಾರಾಗಲಿವೆ. ಹದಿನಾಲ್ಕು ಪ್ವೊಂಟ್‌ಗಳ ಬದಲು ೧೪೦! ವಿಧಾಯಕ ಸಭೆಗಳಲ್ಲಿ ಮುಸ್ಲಿಮ್ ಲೀಗಿನ ಸದಸ್ಯರ ಸಭಾತ್ಯಾಗ; ರೈಲ್ವೇಗಳಲ್ಲಿ ವಾದಮಯ ಚಿತ್ರವಧೆ! ಮುಂದೆ ಕಾಂಗ್ರೆಸಿನವರು ಅಹಿಂಸಾ ತತ್ವದಲ್ಲಿ—"ರೈಲ್ವೇ ಸಂಚಾರ ಮಾಡುವಾಗ ಮೌನವಾಗಿರತಕ್ಕದ್ದು"—ಎಂಬ ಅಂಶವನ್ನು ಸೇರಿಸಬೇಕಾದೀತು.

. . . . .

ಡಾ। ಖರೆಯವರ ಯತ್ನಗಳೆಲ್ಲಾ ನಿಷ್ಫಲವಾದುವು. ಧುರೀಣರು ಖರೆಯವರಿಗೆ "ಖಾರ ಕೊಟ್ಟ"ದು ಮಾತ್ರವಲ್ಲ ಅವರನ್ನು "ನರಿಮಾನಿಸಿ" ಬಿಟ್ಟರು (ಹೊಸ ಪ್ರಯೋಗ! ನರಿಮಾನಿಸುವುದೆಂದರೆ ಮುಂಬಯಿಯ ಕೆ. ಎಫ್. ನರಿಮನರ ಸಾಲಿಗೆ ಸೇರಿಸುವುದೆಂದರ್ಥ.) ಹೇಗಿದ್ದರೂ ಡಾ। ಖರೆಯವರು ಕೂಡಾ ನರಿಮನರಂತೆಯೇ ತನ್ನ ವಿಧೇಯತೆಯಿಂದಲೇ ಗತಸ್ಥಾನವನ್ನು ಪಡೆಯುವುದರಲ್ಲಿದ್ದಾರೆ! ತಥಾಸ್ತು!

. . . . .

ಇಂದಿನ ಪರಿಸ್ಥಿತಿ ಮೊದಲಿನಂತಲ್ಲ. ಪೋಲೀಸಿನವರು ಮಾಡುವುದೆಲ್ಲಾ ನಾನೇ ಮಾಡಿದಂತೆ. ಆದುದರಿಂದ ನೀವು ಪೋಲೀಸಿನವರನ್ನು ನನ್ನನ್ನು ಕಾಣುವಂತೆ ಮಿತ್ರಭಾವದಿಂದ ಕಾಣಬೇಕೆಂದರು—ಶ್ರೀ ಸಿ. ರಾಜಗೋಪಾಲಾಚಾರ್ಯರು.

ಸರಿ. ಪೋಲೀಸಿನವರನ್ನು ಸಾಕ್ಷಾತ್ ಮಹಾತ್ಮಾಜಿಯರೆಂದೇ ಭಾವಿಸೋಣ. ಆದರೆ ಅವರು ಇನ್ನೂ ಖಾದಿ ಹಾಕಲಿಲ್ಲವಲ್ಲಾ?

. . . . .

ಇಷ್ಟರ ತನಕ ಭಾರತೀಯರು ಮಹಾತ್ಮಾಜಿಯರ ಅಂತರ್ವಾಣಿಯ ಕುರಿತು ಮಾತ್ರ ತಿಳಿದಿದ್ದರು. ಆದರೆ ಈಗ ಡಾ। ಖರೆಯವರಿಗೂ ಒಂದು ಅಂತರ್ವಾಣಿಯಿದೆಯೆಂದು ತಿಳಿದುಬರುತ್ತದೆ.

ನಡೆಯದ ಸಾಮಾನಿಗೂ ಒಂದು ಗಿರಾಕಿ ಬಂತಲ್ಲಾ!

. . . . . . .

### ಮುಂದಿನ ವೈಸರಾಯರು?



**ಲಾರ್ಡ್ ಲೋಥಿಯಾನರು**

ಭಾರತದ ಮುಂದಿನ ವೈಸರಾಯರಾಗಿ ನೇಮಿಸಲ್ಪಡುವ ಸಂಭವವಿದೆಯೆಂದು ತಿಳಿದುಬರುತ್ತದೆ.

ಫೆಡರೇಶನಿನ ಕುರಿತು ಈಗ ಉಂಟಾಗಿರುವ ವಿರೋಧವನ್ನು ಚತುರೋಪಾಯಗಳಿಂದ ಸಮಾಧಾನಿಸಿ, ಸಂಸ್ಥಾನಗಳ ನರೇಂದ್ರರೆಲ್ಲರೂ, ಅದಕ್ಕೆ ಸೇರುವಂತೆ ಮಾಡಿ, ಕಾಂಗ್ರೆಸಿಗೆ ಕೆಲವು ಆಶ್ವಾಸನೆಗಳನ್ನು ಕೊಟ್ಟು, ಹೇಗಾದರೂ ಅದನ್ನು ಜಾರಿಗೆ ತರುವಂತೆ ಮಾಡಲು ಅವಶ್ಯವಿರುವ ಯತ್ನಗಳನ್ನು ಲೋಥಿಯಾನರು ಮಾತ್ರ ಯಶಸ್ವಿಯಾಗಿ ಮಾಡಬಲ್ಲರೆಂದು ಬ್ರಿಟಿಷ್ ರಾಜನೀತಿಜ್ಞರ ಅಭಿಮತವಂತೆ. ಮುಂದೆ ಮಿ। ಚೇಂಬರ್ಲೇನರ ಬದಲು ಲಾರ್ಡ್ ಹೆಲಿಫೇಕ್ಸರು ಬ್ರಿಟನಿನ ಪ್ರಧಾನ ಮಂತ್ರಿಗಳಾಗಿ ಆರಿಸಲ್ಪಡುವ ಶಕ್ಯತೆಯಿದೆಯೆಂದು ಲಂಡನಿನ ಪ್ರಸಿದ್ಧ ಪತ್ರಿಕೆಯೊಂದು ಪ್ರಕಟಿಸಿದೆ.

ಮಾಜಿ ಕಾಂಗ್ರೆಸ್ ಅಧ್ಯಕ್ಷರಾದ ಸರ್ ಟಿ ವಿಜಯ ರಾಘವಾಚಾರ್ಯರು ಕೂಡಾ ಬ್ರಿಟನಿನ ಪ್ರಧಾನರಾದ ಮಿ। ಚೇಂಬರ್ಲೇನರು ಯುರೋಪನ್ನು ಉಳಿಸಿರುವರೆಂದು ಹೇಳಿದ್ದಾರೆ.

ಚೇಂಬರ್ಲೇನರು ದನವನ್ನು ಕೊಂದು ಸರ್ವಾಧಿಕಾರಿ ಹುಲಿಗಳಿಗೆ ದಾನ ಮಾಡಿದ್ದಾರೆ!

. . . . . . .

ಖರೆ ವಿಷಾದಾಂತ ನಾಟಕದಿಂದ ಮತ್ತೇನಾಗದಿದ್ದರೂ ಗ್ಲಾನಿಕರ ಘಟನೆಯನ್ನು ಮಣ್ಣುಗೂಡಿಸುವುದು ಹೇಗೆಂಬುದು ಸ್ಪಷ್ಟವಾದಂತಾಯಿತು. ಗಾಂಧಿಜಿಯವರು ಕಾಂಗ್ರೆಸು ಯುದ್ಧಮಾಡುವ ಒಂದು ಸಂಸ್ಥೆಯಾದುದರಿಂದ ಅಧಿಕಾರದ ಕೇಂದ್ರೀಕರಣವು ಅತ್ಯವಶ್ಯವಾಗಿದೆಯೆಂದಿದ್ದಾರೆ. ಅಧಿಕಾರವು ವರ್ಕಿಂಗ್ ಕಮಿಟಿಗಿಲ್ಲದಿದ್ದರೆ ನವರಾಷ್ಟ್ರ ಘಟನೆಯಲ್ಲಿ ಮಂತ್ರಿಗಳಿಗೆ ಯಾವ ಅಧಿಕಾರವೂ ಇಲ್ಲ. ಒಂದು ಸುಪ್ರಭಾತದಲ್ಲಿ ಮಂತ್ರಿಗಳನ್ನು ಪೋಲೀಸರು ಗವರ್ನರರ ಆಜ್ಞೆಯಂತೆ ಕೈದುಮಾಡಬಹುದು. ಕಾಂಗ್ರೆಸು ಅಧಿಕಾರ ಸ್ವೀಕರಿಸಿರುವುದು ಬ್ರಿಟಿಷರು ಯೋಚಿಸಿರುವಂತೆ ಅದನ್ನು ಕಾರ್ಯರೂಪಕ್ಕೆ ತರಲಿಕ್ಕಲ್ಲ; ಅದನ್ನು ಮಣ್ಣುಗೂಡಿಸಲಿಕ್ಕೆ. ಭಾರತೀಯರು [illegible]ರಿಸುವ ಘಟನೆಯು ಆದಷ್ಟು ಬೇಗನೆ ಜಾರಿಗೆ ಬರುವಂತ ಮಾಡಲಿಕ್ಕೆ—ಹೆಚ್ಚಿನವರಿಗಿದು ಮರೆತು ಹೋಗಿದೆ. ಇದನ್ನು ನೆನಪುಮಾಡಿಸುವಂತೆ ಮಾಡಿದ್ದಕ್ಕಾಗಿ ಖರೆಯವರನ್ನು ಅಭಿನಂದಿಸಬೇಡವೆ

. . . . . . .

ಸಿಂಧ ಪ್ರಾಂತ್ಯದ ಪ್ರತಿಯೊಬ್ಬ ಮುಸ್ಲಿಮನೂ ಮುಸ್ಲಿಮ್ ಲೀಗಿನ ಕೀರ್ತಿ ಧ್ವಜವನ್ನು ಎತ್ತಿ ಹಿಡಿಯಬೇಕೆಂದು ಸರ್ ಅಬ್ದುಲ್ಲಾ ಹಾರೂನರು ಬಿನ್ನವಿಸಿಕೊಂಡಿದ್ದಾರೆ.

ಪ್ರತಿಯೊಂದು ಮನೆಯ ಮಾಡಿನ ಮೇಲೆ ಮುಸ್ಲಿಮ್ ಲೀಗಿನ ಧ್ವಜವನ್ನೇರಿಸುವುದರಿಂದ ಕೀರ್ತಿಧ್ವಜವನ್ನು ಎತ್ತಿ ಹಿಡಿದಂತಾಗಬಹುದು!

---

# ನಿಮಗೆ ಬೇಸರವಾದಾಗ ನನಗೆ ಬರೆಯಿರಿ

**ಶ್ರೀ. ಅನಂತ ಪೈ -- ಮಂಗಳೂರು**

"ದಿವಂಗತ ದೇಶಭಕ್ತ ಕಾರ್ನಾಡು ಸದಾಶಿವರಾಯರ ಸ್ಮಾರಕಕ್ಕಾಗಿ ಕಳೆದ ವರುಷ ನಮ್ಮ ಜಿಲ್ಲಾ ಕಾಂಗ್ರೆಸ್ ಕಮಿಟಿಯು ಧನಸಂಗ್ರಹ ಮಾಡಲು ಠರಾವು ಮಾಡಿ ಆ ಬಗ್ಗೆ ಒಂದು ಉಪಸಮಿತಿಯನ್ನು ಕೂಡಾ ನೇಮಿಸಿತ್ತೆಂದು ನನ್ನ ನೆನಪು. ಆದರೆ ಆ ಕುರಿತು ಕಾರ್ಯವೇನೂ ನಡೆದದ್ದು ಕಂಡುಬರುವುದಿಲ್ಲ. ಜಿಲ್ಲಾ ಕಾಂಗ್ರೆಸ್ ಕಮಿಟಿಯವರು ಇತ್ತೀಚೆಗೆ ಹೊರಡಿಸಿದ ಹೇಳಿಕೆಯಲ್ಲಿ ಕೆಲಸ ಮಾಡದ ಅಪವಾದವನ್ನು ಆ ಸಮಿತಿಯ ಮೇಲೆಯೇ ಹೊರಿಸಿದ್ದಾರೆ. ಅಂತೂ ಅವರು ಇವರೆಂದು ದಿವಂಗತರ ಸ್ಮಾರಕದ ಏರ್ಪಾಡಾಗುವುದು ಕಂಡುಬರುವುದಿಲ್ಲ."

ಹೆದರಬೇಡಿರಿ. ಆ ಕುರಿತು ಒಬ್ಬರು ಇನ್ನೊಬ್ಬರನ್ನು ದೂರಿಕೊಳ್ಳುವ ಕೆಲಸವನ್ನಾದರೂ ಮಾಡುತ್ತಾ ಇರುವುದರಿಂದ ಅದು ಆ [illegible]ರಿಗೆ ಮರೆತು ಹೋಗಲಿಲ್ಲವೆಂಬುದು ಖಂಡಿತ. ಮೇಲಾಗಿ, ಈಗ ಅಧಿಕಾರದಲ್ಲಿರುವ ಪಕ್ಷವು ಮೊದಲಿನ 'ಮಂಡಲ'ವನ್ನು ಅಧಿ ದಿಂದ ತಳ್ಳಿದುದರಿಂದ ಈಗ ಆ ಳ್ಳಪಟ್ಟ ಪಕ್ಷಕ್ಕೆ ಈ ಕೆಲಸವನ್ನು ಮಾಡಲು ಆಸ್ಪದವಿಲ್ಲದಾಗಿದೆ. ಈಗಿನ 'ಮಂಡಲ'ವು ಹಿಂದಿನ ಕಮಿಟಿಯ ಠರಾವುಗಳನ್ನು ಆಚರಿಸಲಿಕ್ಕೆ ಘಟನಾತ್ಮಕವಾಗಿ ಬದ್ಧವಾಗಿದ್ದರೂ 'ನೈತಿಕ'ವಾಗಿ ಬದ್ಧವಾಗಿಲ್ಲವೆಂದು ನಮಗೂ ಅನಿಸುತ್ತದೆ. 'ಮಂಡಲ'ಕ್ಕೂ ಹಾಗೆಯೇ ಅನಿಸುತ್ತಿರಲೂ ಬಹುದು. ನಿಮಗೆ ಈ ವಿಚಾರಲ್ಲಿ ಇನ್ನೂ ಹಟವಿದ್ದರೆ ಸ್ಮಾರಕಕ್ಕೆ ಹಣ ಸಂಗ್ರಹ ಮಾಡುವ ಕಾರ್ಯವನ್ನು ಶ್ರೀಮತಿ ಕಮಲಾದೇವಿಯರು ವಹಿಸುವಂತೆ ಪ್ರಯತ್ನಿಸುವುದುತ್ತಮ.

೦ ೦ ೦

**ಶ್ರೀ. ಶ್ರೀನಿವಾಸ ಮೂರ್ತಿ, ಅರಳೇಪೇಟೆ, ಬೆಂಗಳೂರು.**

"ಶ್ರೀ. ಸತ್ಯಮೂರ್ತಿ (ಎಂ.ಎಲ್.ಎ.) ಅವರು ಕೆಲವು ದಿನಗಳ ಹಿಂದೆ ಹಿಂದೀ ವಿರೋಧಿಗಳ ವಿರುದ್ಧವಾಗಿ ಭಾಷಣ ಮಾಡುತ್ತಾ— ಹಿಂದೀ ವಿರೋಧ ಚಳವಳವು ಜನತೆಯ ಪರವಾಗಿ ಮಾಡುವ ಚಳವಳವಲ್ಲವೆಂಬುದನ್ನು ಸಿದ್ಧಪಡಿಸುವುದಕ್ಕಾಗಿ ನಾನು ನನ್ನ 'ಕೇಂದ್ರ ವಿಧಾಯಕ ಸಭೆಯ ಸದಸ್ಯತ್ವಕ್ಕೆ ರಾಜಿನಾಮೆ ಕೊಟ್ಟು ಪುನಃ ಚುನಾವಣೆಗೆ ನಿಲ್ಲಲು ಸಿದ್ಧನಿದ್ದೇನೆ. ಹಿಂದೀ ವಿರೋಧಿಗಳಲ್ಲಿ ಯಾರಾದರೂ ಧೀರರಿದ್ದರೆ ಇವರು ನನ್ನ ವಿರುದ್ಧವಾಗಿ ಚುನಾವಣೆಯಲ್ಲಿ ನಿಂತು ವಿಜಯಿಗಳಾಗಲಿ" ಎಂದು ಹೇಳಿದುದಕ್ಕೆ ಶ್ರೀಮತಿ ಶಿವರಾಜ—ಅವರು ತಾನು ವಿರುದ್ಧವಾಗಿ ನಿಂತು ಸತ್ಯಮೂರ್ತಿಯವರನ್ನು ಸೋಲಿಸಿಬಿಡುವೆನೆಂದು ಬೆದರಿಕೆ ಹಾಕಿದರಂತೆ. ಸತ್ಯಮೂರ್ತಿಯವರು ತೆಪ್ಪಗಿದ್ದಾರೆಂದು ಕೇಳುತ್ತೇನೆ. ಇದಕ್ಕೆ ನೀವೇನನ್ನುತ್ತೀರಿ?"

ದ್ವಾಪರಯುಗದಲ್ಲಿ ಭೀಷ್ಮನು ಶಿಖಂಡಿಯ ವಿರುದ್ಧವಾಗಿ ಯುದ್ಧ ಮಾಡುವುದಿಲ್ಲವೆಂದು ಪಣ ತೊಟ್ಟಿದ್ದನಂತೆ. ಅಲ್ಲದೆ ಹಿಂದಿನ ಕಾಲದಲ್ಲಿ ವೀರರಾರೂ ಹೆಂಗಸರೊಡನೆ ಯುದ್ಧ ಮಾಡುತ್ತಿದ್ದಿಲ್ಲ. ಅಷ್ಟರಿಂದಲೇ ಮೊದಲಿನವರು ಹೇಡಿಗಳೆಂದು ಹೇಳಲಾಗುತ್ತದೆಯೆ? ಶ್ರೀ. ಸತ್ಯಮೂರ್ತಿಗಳು ಕೂಡಾ ಅಂಥದೇ ಒಂದು ಪ್ರತಿಜ್ಞೆಯನ್ನು ಮಾಡಿರಬೇಕೆಂದು ಕಾಣುತ್ತದೆ.

೦ ೦ ೦

**ಶ್ರೀ. ಟಿ. ಎ. ಕರ್ಕೇರ, ಫೋರ್ಟ್, ಮುಂಬಯಿ.**

"ಅಣ್ಣನ ಅಂತಿಮ ಇಚ್ಛೆಗೆ ವಿರುದ್ಧವಾಗಿ ಸರ್ದಾರ್ ವಲ್ಲಭಭಾಯಿ ಪಟೇಲರು ಸುಭಾಷರಿಗೆ ಸಲ್ಲತಕ್ಕ ಹಣವನ್ನು ತಡೆದಿರಿಸುವುದಕ್ಕೆ ಯಾವುದಾದರೂ ಕಾರಣಗಳಿರಬಹುದೊ? ಅಥವಾ ಸರ್ದಾರರಿಗೆ ಸುಭಾಷರ ಮೇಲೆ ವಿಶ್ವಾಸವಿಲ್ಲವೆ? ವರ್ಕಿಂಗ್ ಕಮಿಟಿಯ ಇಬ್ಬರು ಮೆಂಬರರು ಈ ರೀತಿ ವಾದಗ್ರಸ್ತರಾಗಿರುವುದು ಭೂಷಣವೆ?"

ವಲ್ಲಭಭಾಯಿ ಪಟೇಲರಿಗೆ ಸುಭಾಷರ ಮೇಲೆ ವಿಶ್ವಾಸವಿದ್ದರೂ ಅವರ ಧ್ಯೇಯಗಳ ಮೇಲೆ ವಿಶ್ವಾಸವಿಲ್ಲವೆಂದು ತೋರುತ್ತದೆ. ಇವರಿಬ್ಬರಿಗೆ ಪರಸ್ಪರ ಧ್ಯೇಯಗಳಲ್ಲಿ ವಿಶ್ವಾಸವಿಲ್ಲದಿದ್ದರೂ ಇಬ್ಬರಿಗೂ 'ವಾದ'ದ ಮೇಲೆ ವಿಶ್ವಾಸವುಂಟೆಂದು ತೋರುತ್ತದೆ. ಹೆಚ್ಚೇಕೆ. ಬ್ರಿಟಿಷ್ ಸಾಮ್ರಾಜ್ಯಶಾಹಿಯ ಕೈಯಿಂದ ಸ್ವರಾಜ್ಯವನ್ನು ಕಿತ್ತುಕೊಳ್ಳುವ ಕೆಲಸವನ್ನು ವಾದದಿಂದಲೇ ಪೂರೈಸಬಹುದೆಂದು ಅವರ ಈಗಿನ ಈ ಕಾರ್ಯದಿಂದ ಗೊತ್ತಾಗುತ್ತದೆ. ಈ ಕುರಿತು ವರ್ಕಿಂಗ್ ಕಮಿಟಿಯ ನಿರ್ಣಯವಾದೊಡನೆಯೇ ಯಾವುದಾದರೊಂದು ರೀತಿಯಲ್ಲಿ ಈ ವಾದವು ಕೊನೆಗೊಳ್ಳುವುದೆಂದು ಆಶಿಸಲಾಗಿದೆ.

# ಭಾರತ ಸಂಘಟನಾ ಕಾರ್ಯ.

ಬರೆದವರು:—

ಶ್ರೀಮತಿ ರಾಧಾಬಾಯಿ ಸುಬ್ಬರಾಯನ್,

ಕೇಂದ್ರ ನ್ಯಾಯವಿಧಾಯಕ ಸಭೆಯ ಸದಸ್ಯರು.

ಒಂದೇ ರಾಷ್ಟ್ರೀಯ ಸಂಸ್ಕೃತಿಯುಳ್ಳ ಸಂಘಟಿತ ಭಾರತವನ್ನು ನಾವು ಹೊಂದಬೇಕಾದರೆ ಸಾಮಾಜಿಕ ಸುಧಾರಣೆಯೇ ನಮ್ಮ ಮುಂದಿರುವ ಏಕಮಾತ್ರ ಉಪಾಯವಾಗಿದೆ. ರಾಜಕೀಯ ಸುಧಾರಣೆಯು ಪ್ರಾಮುಖ್ಯವಾದರೂ ಸಾಮಾಜಿಕ ಸುಧಾರಣೆಯಿಲ್ಲದೆ ಅದು ನಮ್ಮ ಧ್ಯೇಯವನ್ನು ಸಂಪಾದಿಸಿ ಕೊಡುವಂತಿಲ್ಲ. ಒಂದು ವೇಳೆ ಭಾರತವು ಬಹಿರಂಗಕ್ಕೆ ಸ್ವತಂತ್ರವಾಗಿ ಕಂಡರೂ, ಎಲ್ಲಾ ವರ್ಗಗಳಿಗೆ ಸಮಾನ ಸ್ವಾತಂತ್ರ್ಯ, ಹಾಗೂ ಅವರ ಪರಿಸ್ಥಿತಿಯು ಸುಧಾರಿಸದಿದ್ದರೆ ಅಂತರಂಗದಲ್ಲಿ ಅವ್ಯವಸ್ಥೆಯು ತಲೆದೋರಿ ನಿಜವಾದ ಸ್ವಾತಂತ್ರ್ಯವು ನಮ್ಮಿಂದ ಬಹುದೂರದಲ್ಲಿರುವಂತಾದೀತು. ಹಳೆಯ ಪದ್ಧತಿಗಳಾದ ಅಸ್ಪೃಶ್ಯತೆ, ಜಾತಿಧರ್ಮಗಳ ವ್ಯತ್ಯಾಸ, ಬಾಲ್ಯವಿವಾಹ, ಪರ್ದೆ ಇವೇ ಮೊದಲಾದುವುಗಳು ಸಮಾಜದ ಪ್ರಗತಿಗೆ ತೊಂದರೆಯನ್ನುಂಟು ಮಾಡಿರುವುದರಿಂದ ರಾಜಕೀಯ ಸ್ವಾತಂತ್ರ್ಯವು ನಿಜವಾದದ್ದಾಗಬೇಕಾದರೆ ಇವೆಲ್ಲವುಗಳೂ ಹೋಗಬೇಕು. ರಾಷ್ಟ್ರೀಯತೆಯು ತನ್ನ ಪರಾಕಾಷ್ಠೆಯನ್ನೇರಿರುವ ಈ ಕಾಲದಲ್ಲಿ ಭಾರತವನ್ನು ಸಂಘಟಿತ ರಾಷ್ಟ್ರವನ್ನಾಗಿ ಮಾಡಬೇಕಾಗುವ ಎಲ್ಲಾ ವಿಚಾರಗಳಿಗೆ ನಾವು ಹೆಚ್ಚಿನ ಲಕ್ಷ್ಯವಿತ್ತು ಅವುಗಳ ಸಾಧನೆಗಾಗಿ ದುಡಿಯಬೇಕಾಗಿದೆ. ಅಧಃಪತನ ಹೊಂದಿದವರ ಪುನರುದ್ಧಾರ, ಎಲ್ಲಾ ವರ್ಗದವರ ಆರ್ಥಿಕ ಹಾಗೂ ಸಾಮಾಜಿಕ ಪರಿಸ್ಥಿತಿಗಳ ಸುಧಾರಣೆ ಇವೇ ಮೊದಲಾದುವುಗಳು ಜನತೆಯ ನೈಜ ಪ್ರಾತಿನಿಧ್ಯವನ್ನು ಹೊಂದಿರುವ ವಿಧಾಯಕ ಸಭೆಯ ಪ್ರಾಮುಖ್ಯ ಕರ್ತವ್ಯಗಳಾಗಿವೆ.



ಶ್ರೀಮತಿ ರಾಧಾಬಾಯಿ ಸುಬ್ಬರಾಯನ್‌ರವರು.

ಈ ಪ್ರಾಮುಖ್ಯ ವಿಚಾರಗಳಿಗೆ ಕೇಂದ್ರ ನ್ಯಾಯವಿಧಾಯಕ ಸಭೆಯು ಆದಷ್ಟು ಬೇಗನೆ ತನ್ನ ಲಕ್ಷ್ಯವನ್ನೀಯುವಂತೆ ಮಾಡುವುದಕ್ಕಾಗಿಯೇ ನಾನು ಆ ಸಭೆಗೆ ಸದಸ್ಯೆಯಾಗಿ ಹೋಗಿರುವುದರ ಕಾರಣಗಳಲ್ಲೊಂದಾಗಿದೆ. ಸ್ತ್ರೀಯರ ಪರಿಸ್ಥಿತಿಯಲ್ಲಿ ಸುಧಾರಣೆಗಳನ್ನು ತಂದೊಡ್ಡುವ ಒಂದು ಮಸೂದೆಯನ್ನು ನಾನು ಈಗಾಗಲೇ ಸೂಚಿಸಿರುತ್ತೇನೆ ನಾನು ಅದನ್ನು ವಿನೋದಕ್ಕಾಗಿ ಸೂಚಿಸಿರುವುದಲ್ಲ. ಸಮಾನತೆಯೆಂಬ ಶುಷ್ಕ ಧ್ಯೇಯವಾದದಿಂದ ಪ್ರೇರಿಸಲ್ಪಟ್ಟು ಅದನ್ನು ಮುಂದೆ ತಂದಿರುವುದೂ ಅಲ್ಲ.

ಸಾಮಾಜಿಕ ಮತ್ತು ಸಾರ್ವಜನಿಕ ರಂಗದಲ್ಲಿ ಭಾಗವಹಿಸಿರುವುದರಿಂದಲೂ, ನಮ್ಮ ದೇಶದ ಬಹುಭಾಗಗಳಲ್ಲಿ ಸಂಚರಿಸಿರುವುದರಿಂದ ಎಲ್ಲಾ ವರ್ಗಗಳ ಜನರ ಆಚಾರ ವಿಚಾರಗಳನ್ನು ಸ್ವತಹ ಕಂಡು ಪರಿಚಯ ಮಾಡಿಕೊಂಡಿರುವುದರಿಂದಲೂ, ಕೆಲವು ಹಳೆ ಪದ್ಧತಿಗಳಿಂದ ಅವರ್ಣನೀಯ ಕಷ್ಟ ಪರಂಪರೆಗಳು ನಮ್ಮ ಜನರಿಗೆ ಉಂಟಾಗಿರುವುದರಿಂದಲೂ, ಅವುಗಳ ಸುಧಾರಣೆಗಾಗಿ ಒಂದು ಮಸೂದೆಯನ್ನು ಸೂಚಿಸಬೇಕಾಯಿತು. ಧರ್ಮವು ಪ್ರತಿಯೊಬ್ಬರಿಂದಲೂ ಮಾನಿಸಲ್ಪಡುತ್ತಿರುವಾಗ, ಸರ್ವರೂ ದೇವರನ್ನು ಪೂಜಿಸುತ್ತಿದ್ದಾಗ ಈ ಪದ್ಧತಿಗಳು ವಿಶೇಷ ಹಾನಿಯನ್ನುಂಟು ಮಾಡುತ್ತಿದ್ದಿಲ್ಲ. ಅವಿಭಕ್ತ ಕುಟುಂಬ ಪದ್ಧತಿಯಿಂದಾಗಿ ಕುಟುಂಬದ ಸದಸ್ಯರು ಪರಸ್ಪರ ಪ್ರೇಮದ ನೇಣಿನಿಂದ ಬಂಧಿಸಲ್ಪಡುತ್ತಿದ್ದರು.

# 'ಸಮಾಜದ ಸುಧಾರಣೆಯಿಂದಲೇ

## ಃ ಃ ಃ ಃ ಃ ಃ ಜನತೆಯು ಮೂಢ ಪದ್ಧತಿ

ಸ್ತ್ರೀಯರು ಸಮಾಜದಲ್ಲಿಯೂ ಮನೆಗಳಲ್ಲಿಯೂ ಗೌರವಿಸಲ್ಪಡುತ್ತಿದ್ದರು. ಆದರೆ ಆಧುನಿಕ ಭಾರತದ ಪರಿಸ್ಥಿತಿಯು ತೀರಾ ವ್ಯತ್ಯಾಸವಾಗಿದೆ. ಒಂದು ರಾಷ್ಟ್ರದ ಪ್ರತಿಯೊಂದು ಪದ್ಧತಿಯಲ್ಲಿ ಬೇರೆ ಬೇರೆ ಕಾಲಗಳಲ್ಲಿ ಬದಲಾವಣೆಯಾಗಬೇಕಾದುದು ಸ್ವಾಭಾವಿಕವಾಗಿದೆ. ಆದರೆ ದುರದೃಷ್ಟವಶಾತ್ ಆ ಬದಲಾವಣೆಗಳು ಒಂದೇ ರೀತಿಯಾಗಿರದೆ ಸಮಾಜದ ದಿನಚರಿಯ ಚಟುವಟಿಕೆಗೆ ತೊಡಕನ್ನುಂಟು ಮಾಡಿದೆ. ಅವಿಭಕ್ತ ಕುಟುಂಬ ಪದ್ಧತಿಯು ಅಳಿಯುತ್ತಾ ಬರುತ್ತಿದೆ. ಅದರೊಡನೆ ಪರಸ್ಪರ ಸಹಾಯ, ದಾನ ಧರ್ಮ ಪದ್ಧತಿಗಳೂ ಮಾಯವಾಗಲಾರಂಭಿಸಿವೆ. ಆಧುನಿಕ ಪ್ರಪಂಚದೊಡನೆ ಸಂಬಂಧವು ಬೆಳೆಯುತ್ತಾ ಬರುತ್ತಿರುವುದರಿಂದ ನಮ್ಮ ಜನರಲ್ಲಿ ವಸ್ತುವಾದವೂ, ವೈಯಕ್ತಿಕ ಅಭಿರುಚಿಗಳೂ ಹೆಚ್ಚುತ್ತಾ ಬಂದು ಅವರ ಮನೋಗತಿಯನ್ನೇ ಬದಲಾಯಿಸಿವೆ. ನಮ್ಮ ನಾಗರಿಕತೆಯು ಮೆಲ್ಲನೆ ವ್ಯತ್ಯಾಸವಾಗುತ್ತಾ ಬರುವಾಗ ಅದರ ವೈಶಿಷ್ಟ್ಯಗಳಾಗಿದ್ದ ಯೋಗ್ಯ ಕ್ರಮಗಳು ಕೂಡಾ ನಿರ್ನಾಮವಾಗುತ್ತಿವೆಯಾದರೂ ಅದೇ ನಾಗರಿಕತೆಯ ಕಠಿನ ನಿಯಮಗಳು ಮಾತ್ರ ಇನ್ನೂ ಬಳಕೆಯಲ್ಲಿವೆ. ಈ ನಿಯಮಗಳಿಂದಾಗಿ ಅಸಹನೀಯ ಅನ್ಯಾಯಗಳು ನಡೆಯುತ್ತಿವೆ. ಇವುಗಳು ಸ್ತ್ರೀ ಜೀವನಕ್ಕೆ ವಿಶೇಷವಾಗಿ ಸಂಬಂಧಿಸುವುದರಿಂದ ಅವರ ಸುಖ ಶಾಂತಿಗಳಿಗೆ ಕುಠಾರ ಪ್ರಾಯವಾಗಿವೆಯೆಂದು ಹೇಳಬೇಕಾಗಿಲ್ಲ.

ಆದುದರಿಂದ ಆ ನಿಯಮಗಳನ್ನು ಇಂದಿನ ಪರಿಸ್ಥಿತಿಗೆ ಅನುಕೂಲವಾಗುವಂತೆ ಬದಲಾಯಿಸುವುದು ಪ್ರಾಮುಖ್ಯವಾಗಿದೆ. ಅವುಗಳು ನಮ್ಮ ರಾಷ್ಟ್ರದಲ್ಲಿ ಬೇರೂರಿದವುಗಳಲ್ಲ; ಆ ನಿಯಮಗಳನ್ನು ಜನರು ಸಾರ್ವತ್ರಿಕವಾಗಿ ಆಚರಿಸುತ್ತಿಲ್ಲ.

ಕೆಲವು ಜಾತಿಗಳ ಜನರಿಗೆ ಬಾಲ್ಯವಿವಾಹವೆಂದರೆ ಏನೆಂದು ಅರಿಯದು. ವಿವಾಹವಿಚ್ಛೇದವು ಅವರಿಗೆ ತೀರಾ ಹೊಸತಾಗಿದೆ. ನಮ್ಮ ಭಾಷೆ ಮತ್ತು ಜಾತಿಗಳಂತೆ ಸಾಮಾಜಿಕ ಪದ್ಧತಿಗಳಲ್ಲಿಯೂ ಹಲವಾರು ವಿಧಗಳಿರುವುದರಿಂದ ಪ್ರಗತಿಗೆ ಅವುಗಳು ಹಾನಿಕಾರಿಯಾಗಿವೆ. ನಮ್ಮ ಅಭಿವೃದ್ಧಿಯಾಗಬೇಕಾದರೆ ಮಹತ್ವದ ಸುಧಾರಣೆಗಳನ್ನು ಮಾಡಬೇಕಾಗಿದೆ. ಈ ಪ್ರಾಮುಖ್ಯ ಪ್ರಶ್ನೆಯನ್ನು ನಮ್ಮ ಕೆಲವು ಧುರೀಣರು ಈಗಾಗಲೇ ಮನಗಂಡಿದ್ದಾರೆ. ಅವರು ಉಂಟು ಮಾಡಿದ ಸ್ಫೂರ್ತಿಯಿಂದ, ಮತ್ತು ಲೋಕಚಳವಳದ ಪ್ರಭಾವದಿಂದಲೇ ಸ್ತ್ರೀಯರಿಗೆ ಇನ್ನಷ್ಟು ಸ್ವಾತಂತ್ರ್ಯ, ಇನ್ನಷ್ಟು ಸಮಾನತೆಯು ಸಿಗಬೇಕೆಂಬ ಅಭಿಪ್ರಾಯವು ಎಲ್ಲ

ಸ್ತ್ರೀಯರಿಗೆ ಪೂರ್ಣ ಸಮಾನತೆಯು ದೊರಕಿದಾಗ—



ಅವರು ಪುರುಷರಂತೆಯೇ ಮಾತೃಭೂಮಿಯ ಧೀರ ಯೋಧೆಯರಾಗಿ ತಮ್ಮ ಸಾಮರ್ಥ್ಯವನ್ನು ಸ್ಪಷ್ಟಗೊಳಿಸುವರು.

# ಭಾರತ ಸಂಘಟನೆಯು ಸಾಧ್ಯ ಗಳನ್ನು ಕಿತ್ತೊಗೆಯಬೇಕು. ಃ ಃ ಃ ಃ ಃ ಃ

ರಲ್ಲಿಯೂ ಬೇರೂರುತ್ತಾ ಬರಲಾರಂಭಿಸಿದೆ. ಈಗಾಗಲೇ ಜನಾಭಿಪ್ರಾಯದ ತಕ್ಕಡಿಯು ಸ್ತ್ರೀಯರ ಕಡೆಗೆ ತೂಗಿರುತ್ತದೆ. ವಿಧವಾ ವಿವಾಹ ಮಸೂದೆ, ಸಿವಿಲ್ ವಿವಾಹ ಮಸೂದೆ, ಬಾಲ್ಯವಿವಾಹ ನಿರೋಧ ಮಸೂದೆ ಇವೇ ಮೊದಲಾದುವುಗಳು ಜಾರಿಗೆ ಬಂದಿವೆ.



ಅಹಿಂಸಾತ್ಮಕ ಸ್ವಾತಂತ್ರ್ಯ ಸಮರದಲ್ಲಿ—

ಪುರುಷರ ಭುಜಕ್ಕೆ—ಭುಜ—ತಗಲಿಸಿ ನಿರ್ಭೀತಿಯಿಂದ ಸ್ತ್ರೀಯರು ತಮ್ಮ ಕರ್ತವ್ಯವನ್ನು ಪಾಲಿಸಲು ಹಿಂಜರಿಯರು.

ಸ್ವಲ್ಪ ಕಾಲದೊಳಗಾಗಿ ನಮ್ಮ ಸಾಮಾಜಿಕ ದುಷ್ಟ ಪದ್ಧತಿಗಳನ್ನು ಹೋಗಲಾಡಿಸುವ ಇನ್ನೂ ಕೆಲವು ಮಸೂದೆಗಳು ಜಾರಿಗೆ ಬರುವುದೆಂದು ನನ್ನ ಭರವಸೆಯಾಗಿದೆ. "ಸತೀ" ಪದ್ಧತಿಗೆ ಜನತೆಯು ತನ್ನ ಧಿಕ್ಕಾರವನ್ನು ತೋರಿಸಿದಂತೆಯೇ ಬಹುಪತ್ನಿತ್ವ ಮತ್ತು ಯೋಗ್ಯ ಸತಿಯರನ್ನು ಬಿಟ್ಟುಬಿಡುವುದನ್ನು ಕೂಡಾ ಖಂಡಿಸಲಿದೆಯೆಂದು ನನ್ನೆಣಿಕೆ. ವೇಶ್ಯಾ ಪದ್ಧತಿಯನ್ನು ಜನರು ಕಡೆಗಣಿಸುವರೆಂದು ನನ್ನ ವಿಶ್ವಾಸ. ಹೀಗಾದರೆ ಸ್ತ್ರೀಯರು ಸಮಾಜದಲ್ಲಿಯೂ ಮನೆಗಳಲ್ಲಿಯೂ ಗೌರವಿಸಲ್ಪಡುವರೆಂಬುದರಲ್ಲಿ ನಿಸ್ಸಂಶಯ. ಅವರ ಪರಿಸ್ಥಿತಿಯನ್ನು ಸುಧಾರಿಸಿದರೆ ಸ್ತ್ರೀಯರು ಖಾಸಗಿ ಮತ್ತು ಸಾರ್ವಜನಿಕ ಕಾರ್ಯಗಳನ್ನು ಯಶಸ್ವಿಯಾಗಿ ಪೂರೈಸಲು ಹಿಂಜರಿಯದೆ ಹೊಸ ಸಂಘಟಿತ ಭಾರತದ ರಚನಾಕಾರ್ಯದಲ್ಲಿ ಪ್ರಾಮುಖ್ಯ ಭಾಗ ವಹಿಸುವರು.

ನಮ್ಮ ಸಮಾಜದ ಸಾಮಾಜಿಕ ಹಾಗೂ ಕಾಯಿದೆಗೆ ಸಂಬಂಧಪಟ್ಟ ತಡೆಗಳನ್ನು ಕಿತ್ತೊಗೆಯಲು ನಾನು ಮುಂದೆ ತಂದಿರುವ ಬಹುಪತ್ನಿ ನಿರೋಧ ಮಸೂದೆಯು ಈ ಆಶಾಕಾಂಕ್ಷೆಗಳನ್ನು ಸ್ವಲ್ಪ ಮಟ್ಟಿಗೆ ಪೂರೈಸಿ, ಸ್ತ್ರೀಪುರುಷರು ಸಮಾನ ಸ್ವಾತಂತ್ರ್ಯದಿಂದ ಭಾವೀ ಜನಾಂಗವು ಸುಖಮಯವಾಗುವಂತೆ ಭುಜಕ್ಕೆ ಭುಜ ತಾಗಿಸಿ ದುಡಿಯಲು ಸಹಾಯ ಮಾಡುವುದೆಂದು ನನ್ನ ಭರವಸೆಯಾಗಿದೆ.

---

# ಅಂತರಂಗದ ಸುದ್ದಿಗಳು

## ಖರೆಯವರ ಪಕ್ಷಾಂತರ?

ಮಧ್ಯಪ್ರಾಂತ್ಯದ ಮಾಜಿಪ್ರಧಾನರಾದ ಡಾ| ಯನ್. ಬಿ. ಖರೆಯವರು ಡೆಮಾಕ್ರೆಟಿಕ್ ಸ್ವರಾಜ್ಯ ಪಕ್ಷಕ್ಕೆ ಸೇರುವರಂತೆ.

. . . . . . .

## ಪಟೇಲರಿಗೆ ಸರ್ವಾಧಿಕಾರ?

ಮುಂದಿನ ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಸಭೆಯಲ್ಲಿ ಸರ್ದಾರ್ ವಲ್ಲಭಭಾಯಿ ಪಟೇಲರಿಗೆ ಪ್ರಾಂತಿಕ ಮಂತ್ರಿಮಂಡಲಗಳ ಮೇಲೆ ಸಂಪೂರ್ಣ ಸರ್ವಾಧಿಕಾರ ನಡೆಸುವ ಹಕ್ಕನ್ನು ಕೊಡಲಿರುವರೆಂದು ವದಂತಿ.

. . . . . . .

## ಮಲ್ಯರಿಗೆ ಶರ್ತ?

ಶ್ರೀ. ಹಿ. ರಾ. ಮಲ್ಯರು ದ. ಕ. ಜಿಲ್ಲೆಯ ಸಮತಾವಾದೀ ಪಕ್ಷಕ್ಕೆ ಸೇರಿದರೆ ಅವರನ್ನು ಜಿಲ್ಲಾ ಕಾಂಗ್ರೆಸ್ ವರ್ಕಿಂಗ್ ಕಮಿಟಿಯ ಸದಸ್ಯರನ್ನಾಗಿ ಸೇರಿಸಕೊಳ್ಳಬಹುದೆಂದು ಸಮತಾವಾದಿಗಳ ಶರ್ತವಂತೆ.

. . . . . . .

## ಜಿಲ್ಲೆಗೊಂದು ಗೌರವ?

ಮುಂದಿನ ವರುಷ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷತೆಗೆ ಶ್ರೀ. ಶ್ರೀನಿವಾಸ ಮಲ್ಯರನ್ನು ಆರಿಸುವ ಪ್ರಬಲ ಯತ್ನಗಳಾಗುತ್ತಿವೆಯೆಂದು ಕಿಂವದಂತಿ.

. . . . . . .

## ವೇಶ್ಯಾವೃತ್ತಿಯ ಅಂತ್ಯ?

ಮಂಗಳೂರು ಮುನ್ಸಿಪಾಲಿಟಿ ಗಡಿಯೊಳಗಿರುವ ವೇಶ್ಯೆಯರನ್ನು ಆ ದುಷ್ಟ ವೃತ್ತಿಯಿಂದ ಉಳಿಸಲು "ವೇಶ್ಯಾಶ್ರಮ" (Rescue Home) ವನ್ನು ತೆರೆಯಬೇಕೆಂದು ಕಾಂಗ್ರೆಸ್ ಪಕ್ಷದ ಒಬ್ಬ ಸದಸ್ಯರು ಮುನ್ಸಿಪಲ್ ಸಭೆಯಲ್ಲಿ ಠರಾವು ತರಲಿದ್ದಾರಂತೆ.

. . . . . . .

ಅಂತರಂಗದ ವಿಶೇಷ
ಪ್ರತಿನಿಧಿಯ ಗುಟ್ಟಿನ
ಡೈರಿಯ ಕೇವಲ
ನಿರಾಧಾರ ಸುದ್ದಿಗಳು
ಓದಿ ಸರ್ವಥಾ ಗಡಿ
ಬಿಡಿ ಮಾಡಬಾರದು.

## ಸರ್ವರೂ ಖಾದಿಧಾರಿಗಳಾಗಬೇಕು?

ಜಿಲ್ಲಾ ಬೋರ್ಡಿನ ಎಲ್ಲಾ ಕೆಲಸಗಾರರು ಖಾದಿಯನ್ನೇ ಧರಿಸಬೇಕೆಂಬ ಒಂದು ಠರಾವು ಸದ್ಯದಲ್ಲಿಯೇ ಆಗಲಿದೆಯಂತೆ. ಈಗಿನ ಕಾಂಗ್ರೆಸ್ ಅಧ್ಯಕ್ಷರಾದ ಡಾ| ಕೆ. ವಿಟ್ಠಲ ಶೆಟ್ಟರು ಜಿಲ್ಲೆಯ ವಿವಿಧ ಭಾಗಗಳಲ್ಲಿ ಖಾದಿ ವಿಕ್ರಯ ಕೇಂದ್ರಗಳನ್ನು ಸದ್ಯದಲ್ಲಿಯೇ ತೆರೆಯಲಿರುವರೆಂಬ ವಾರ್ತೆ.

. . . . . . .

## ಉಡುಪಿಯ ಹೊಸ ಸಂಸ್ಥೆ?

ಸೆಪ್ಟೆಂಬರದಲ್ಲಿ ನಡೆಯಲಿರುವ ಮ್ಯುನಿಸಿಪಲ್ ಚುನಾವಣಾ ಕಾಲದಲ್ಲಿ ಖಾದಿ ಟೊಪ್ಪಿಗಳ ಬೇಡಿಕೆಯನ್ನು ಪೂರೈಸಲು ಒಂದು ಸಂಚಾರೀ ಲಿಮಿಟೆಡ್ ಸಂಸ್ಥೆಯು ಸ್ಥಾಪಿಸಲ್ಪಡುವುದಂತೆ.

. . . . . . .

## ಫೆಡರಲ್ ಎಸೆಂಬ್ಲಿಗೆ ಉಮೇದ್ವಾರರು?

ನಮ್ಮ ಜಿಲ್ಲೆಯ ವಿಧಾಯಕ ಸಭೆಯ ಸದಸ್ಯರಲ್ಲೊಬ್ಬರು ಮುಂಬರುವ ಫೆಡರಲ್ ಎಸೆಂಬ್ಲಿ ಸದಸ್ಯತನದ ಚುನಾವಣೆಗೆ ಸರ್ವ ಸಿದ್ಧತೆಗಳನ್ನು ಮಾಡುತ್ತಿದ್ದಾರೆಂದು ಒಂದು ನಿರಾಧಾರ ವಾರ್ತೆ.

. . . . . . .

## ಕರ್ನಾಟಕದ ರಾಜಧಾನಿ?

ಕರ್ನಾಟಕ ಏಕೀಕರಣವಾದರೆ ಮಂಗಳೂರನ್ನು ರಾಜಧಾನಿಯನ್ನಾಗಿ ಮಾಡುವರಂತೆ.

. . . . . . .

## ೨ ಲಕ್ಷ ಕಾಂಗ್ರೆಸ್ ಸದಸ್ಯರು?

ಚಾಲ್ತಿ ವರುಷದಲ್ಲಿ ನಮ್ಮ ಜಿಲ್ಲೆಯಲ್ಲಿ ೨ ಲಕ್ಷ ಕಾಂಗ್ರೆಸ್ ಸದಸ್ಯರು ಸೇರಿಸಲ್ಪಡಬಹುದೆಂದು ಭಾವಿಸಲಾಗಿದೆಯಂತೆ.

. . . . . . .

## ಉಡುಪಿಗೆ ರೈಲು?

ಮಂಗಳೂರಿಂದ ಉಡುಪಿಯ ವರೆಗೆ ರೈಲ್ವೇ ಹಾದಿ ಹಾಕಿಸಲು ಉಡುಪಿಯ ಪ್ರಮುಖರು ಕೂಡಿ ಒಂದು ಲಿಮಿಟೆಡ್ ಸಂಸ್ಥೆಯನ್ನು ಸ್ಥಾಪಿಸಲಿರುವರಂತೆ. ಮಲ್ಪೆಯಿಂದ ಮರಳನ್ನು ಮಂಗಳೂರಿಗೆ ಸಾಗಿಸಲು ಇದು ಬಹಳ ಸಹಾಯಕಾರಿಯಾಗುವುದೆಂದು ತಿಳಿಯಲಾಗಿದೆ.

. . . . . . .

## ದೊಡ್ಡದಿನ ಪತ್ರಿಕೆ?

೧೯೪೬ರಲ್ಲಿ ಉಡುಪಿಯಿಂದ ಹಿಂದೂ ಆಕಾರದ ೨೦ ಪುಟಗಳನ್ನೊಳಗೊಂಡ ಒಂದಾಣೆ ಕ್ರಯದ ದಿನಪತ್ರಿಕೆಯೊಂದು ಹೊರಡುವುದಂತೆ.

. . . . . . .

## ಗ್ರಾಮಗಳಲ್ಲಿ ರೇಡಿಯೊ?

ಮುಂದಿನ ವರುಷ ದಕ್ಷಿಣ ಕನ್ನಡದಲ್ಲಿ ಪಾನನಿಷೇಧ ಮಸೂದೆಯು ಜಾರಿಗೆ ಬರುವುದಂತೆ. ಅದೇ ಸಂದರ್ಭದಲ್ಲಿ ಎಲ್ಲಾ ಗ್ರಾಮಗಳಲ್ಲಿ ಎರಡೆರಡು ರೇಡಿಯೋ ಸೆಟ್ಟುಗಳು ಸರಕಾರದವರಿಂದ ಇಡಲ್ಪಡಬಹುದೆಂದು ವಿಶ್ವಸನೀಯ ವ್ಯಕ್ತಿಗಳು ಹೇಳುತ್ತಿದ್ದಾರೆ.

. . . . . . .

## ಮಂಗಳೂರಲ್ಲಿ ಕಾಂಗ್ರೆಸ್ ಅಧಿವೇಶನ?

೧೯೪೬ರಲ್ಲಿ ಅಖಿಲಭಾರತ ಕಾಂಗ್ರೆಸ್ ಅಧಿವೇಶನವು ಮಂಗಳೂರಲ್ಲಿ ಜರಗುವುದೆಂದು ತಿಳಿಯಲಾಗಿದೆಯೆಂದು ವದಂತಿ.

. . . . . . .

## ಯುರೋಪಿಗೆ ಶ್ರೀ. ಮಲ್ಯರು?

ಶ್ರೀ. ಯು. ಶ್ರೀನಿವಾಸ ಮಲ್ಯರೂ ಸದ್ಯದಲ್ಲಿಯೇ ಯುರೋಪಿಗೆ ತೆರಳುವರಂತೆ.

# ಪೋಕೀ ಜಗತ್ತಿನ ೦ ೦ ೦ ೦ ೦ ೦ ೦ ೦ ೦ ೦ ಝೋಕೀ ಪುರಾಣ

"ಇದ್ದದ್ದು ಇದ್ದ್ಹಾಗೇ ಹೇಳೋ ಕಂದಯ್ಯ" ಎಂದಿದ್ದಾಳೆ ನಮ್ಮ ಮುತ್ತಜ್ಜಿ. ನನ್ನ ಪುರಾಣದಲ್ಲಿ ಕಂಡದ್ದನ್ನು ಇದ್ದಂತೇ ಹೇಳೋದೇ ನನ್ನ ನಿರ್ಧಾರ. —"ಕಂದಯ್ಯ".

## ಯುರೋಪಿನ ತಾಳಮದ್ದಲೆ

ಫ್ಯಾಸಿಸ್ಟ್ ತ್ರಿಮೂರ್ತಿಗಳು ಜಗತ್ತಿನ ರಾಜಕಾರಣದಲ್ಲಿ ಪ್ರಾಮುಖ್ಯ ಸ್ಥಾನವನ್ನು ಹೊಂದಿವೆ. ಇಟೆಲಿ-ಜರ್ಮನ್-ಜಪಾನ್! ಚೀನದಲ್ಲಿ ಜಪಾನು ಸೋತೊಡನೆಯೇ ಜರ್ಮನಿಯು ಜೆಕೊಸ್ಲೊವೇಕಿಯವನ್ನು ನುಗ್ಗುವುದಂತೆ. ಪುರಾಣಕ್ಕೂ ಸಾಹೇಬರಿಗೂ ಇರುವ ಸಂಬಂಧದಂತೆ ಜಪಾನಿಗೂ ಜೆಕೊಸ್ಲೊವೇಕಿಯಕ್ಕೂ ಸಂಬಂಧವೇನೆಂದು ಕೇಳಬಹುದು. "ಕಳ್ಳಕಳ್ಳಗೆ ಗಂಟು-ಮುಳ್ಳು ಜಾಲಿಗೆ ನಂಟು" ಎಂದಿದೆಯಲ್ಲಾ ಗಾದೆ-ಹಾಗೇ ಸಾಮ್ರಾಜ್ಯಶಾಹೀ ರಾಷ್ಟ್ರಗಳಿಗೆಲ್ಲಾ ಒಂದೇ ಬುದ್ಧಿ. ಚೀನದಲ್ಲಿ ಜಪಾನ್ ಸೋತಿತೆಂದರೆ ರಷ್ಯವು ಜಪಾನಿನ ಮೇಲೆ ಬೀಳುತ್ತದೆ. ಇದರಿಂದ ಸುಖವಿಲ್ಲವೆಂದು ಬಗೆದು ಜರ್ಮನಿಯು ಸೊವಿಯೆಟ್ ರಷ್ಯಕ್ಕೆ ಪಶ್ಚಿಮ ಭಾಗದಲ್ಲಿ ತೊಂದರೆ ಕೊಡಲಾರಂಭಿಸುತ್ತದೆ. ಆದರೆ ಯುದ್ಧ ಮಾಡಲು ಯಾರಿಗೂ ಮನಸ್ಸಿಲ್ಲವೆನ್ನಿ. ಮೊನ್ನೆ ಮಂಚೂರಿಯ ಅವ್ಯವಸ್ಥೆಯಿಂದಾಗಿ ಜಪಾನು ಕಣ್ಮುಚ್ಚಿಕೊಂಡು "ಶರಣು ಕುಡುಗೋಲು ಕೊಡತಿಯ ಧ್ವಜದ ದೇವನೆ" ಎಂದು ಹೇಳಿತು. ಅತ್ತ ಹಿಟ್ಲರ್ ಮಹಾಶಯನೂ ಜೆಕೊಸ್ಲೊವೇಕಿಯದ ವಿಚಾರದಲ್ಲಿ ಒಮ್ಮೆಯೇ ಹಾರಿದರೆ ತೊಂದರೆಯಾಗಬಹುದೆಂದು-"ಏನ ಮಾಡಲಿ ನಿನ್ನ ಬಳಿಗೆ ಬಂದು" ಎಂದು "ಆರ್ಯ"ನೆಂದು ಹೇಳಿಕೊಳ್ಳುವವನೂ ಕೂಡಾ ದ್ರಾವಿಡ ಹಾಡನ್ನು ಹಾಡುತ್ತಿದ್ದಾನೆ. ಆ ಹಾಡಿಗೆ "ಅರೆ ಜೀವಿ ಮಹರ್ಷಿ"ಗಳಾದ ಚೇಂಬರ್ಲೆನರ ತಾಳ. ಚಂಡಾಸುರ ಮುಸ್ಸೋಲಿನಿಯ ಮೃದಂಗನಾದನ. ನೆರೆದವರು ಜಗತ್ತಿನ ರಾಷ್ಟ್ರಗಳು. ಹಿಟ್ಲರರು ಯಾವ ಪ್ರಸಂಗ" ಹೇಳುವರೆಂಬುದನ್ನು ನೋಡಬೇಕಾಗಿದೆ. ಚೇಂಬರ್ಲೆನರ ತಾಳದ ಬಡಿತವನ್ನು ಕೇಳಿ ಶ್ರೀ. ಸರ್. ಟಿ. ರಾಘವಾಚಾರ್ಯರ ಕೂಡಾ- "ಭಲೆ! ಯುರೋಪಿನ ವಿಧಾತ' ಎಂದು ಬಿಟ್ಟಿದ್ದಾರೆ!

. . . .

## ಅಹಿಂಸಾ ಯುದ್ಧ!

ಮಧ್ಯಪ್ರಾಂತ್ಯದ ಆ 'ರುದ್ರ ನಾಟಕ' ವನ್ನು ಸಾಮಾನ್ಯ ಭಾಷೆಯಲ್ಲಿ ಹೇಳಲಾಗುವುದಿಲ್ಲ. ಆದುದರಿಂದ-ಮಧ್ಯಪ್ರಾಂತ್ಯದ ಆಕಾಶದಲ್ಲಿ- ಉತ್ಪಾತದ ಕಾರ್ಮೋಡಗಳು ತುಂಬಿ ಮಂತ್ರಿಮಂಡಲಗಳ ಬಿಕ್ಕಟ್ಟೇ ಬಿಕ್ಕಟ್ಟು. ತಲೆದೋರಿದುವು. ಖರೆಮಂಡಲವು ಉರುಳಿ ಶುಕ್ಲಮಂಡಲವು ಮೇಲೆ ಬಂದರೂ ಧೂಮಕೇತು ಗ್ರಹವು ಮಾತ್ರ ಎಲ್ಲೆಡೆಗಳಲ್ಲಿಯೂ ಸುಳಿಯಲಾರಂಭಿಸಿದೆ. ಸರ್ದಾರ್ ಪಟೇಲ್ ಮತ್ತು ಡಾ| ಖರೆಯವರೊಳಗೆ ಹೇಳಿಕೆಗಳ ಯುದ್ಧವು ನಡೆಯುತ್ತಿದೆ. ನಾಗಪುರ ಮೊದಲಾದೆಡೆಗಳಲ್ಲಿ ಖಂಡನೆಯ ಕಠಿನ ಠರಾವುಗಳು ಮಂಜೂರಾಗುತ್ತಿವೆ. ಫ್ಯಾಸಿಸ್ಟ್ ರಾಷ್ಟ್ರದಲ್ಲಾದರೆ ಖರೆಯವರ ಕೊರಳೇ ಉರುಳಿ ಹೋಗುತ್ತಿತ್ತೆಂದು ಗಾಂಧಿಜಿಯವರಂದಿದ್ದಾರೆ. ಇತ್ತ ಖರೆಯವರನ್ನು ದೂರಲಾಗುವುದಿಲ್ಲ-ಅವರು ತನ್ನ ಅಂತರ್ವಾಣಿಯು ಹೇಳಿದಂತೆ ಮಾಡಿದರಂತೆ. ಈ ಅಹಿಂಸಾ ಯುದ್ಧವು ಹೇಗೆ ಕೊನೆಗೊಳ್ಳುವುದೋ ವಿಧಾತನೇ ಬಲ್ಲ!

. . . .

## ಬ್ರಿಟನಿನ ನಾರದರು!

ಜೆಕೊಸ್ಲೊವೇಕಿಯದಲ್ಲಿ ಸುಡೇಟನ್ ಜರ್ಮನರಿಗೂ ಝೆಕ್ಕರಿಗೂ ಮನಸ್ತಾಪ ಪ್ರಾರಂಭವಾಗಿತ್ತಷ್ಟೆ. ಬ್ರಿಟನ್ ದೇವಲೋಕದವರು ರಾಜಿಮಾಡಿ ಹಾಕಲು ಬ್ರಿಟನಿನ ನಾರದರಾದ ರನ್ಸಿಮನ್ ಪ್ರಭುಗಳನ್ನು ಜೆಕೊಸ್ಲೊವೇಕಿಯಕ್ಕೆ ಕಳುಹಿಸಿದರು. ಈ ನಾರದರಿಗೆ ಜರ್ಮನರೆಂದರೆ ಬಹಳ ಪ್ರಿಯವಂತೆ. ಇದು ಫ್ರಾನ್ಸಿಗೆ ತಿಳಿದು "ಛೆ, ಕಣ್ಣಿಗೆ ಮಣ್ಣು ಹಾಕಿದರಲ್ಲಾ ಬ್ರಿಟನಿನವರು" ಎಂದು ಅಲ್ಲಿಯ ರಾಜತಂತ್ರಜ್ಞರು ಕಣ್ಣೀರು ಸುರಿಸಲಾರಂಭಿಸಿರುವರಂತೆ. ರನ್ಸಿಮನ್ ಬಂದೊಡನೆಯೇ ಜರ್ಮನರು ತಮ್ಮ ಸುಳ್ಳಿನ ಫ್ಯಾಕ್ಟರಿಯಿಂದ ಒಂದು ಬಾಂಬನ್ನು ಬಿಟ್ಟು ಗಡಿನಾಡಿನಲ್ಲಿ ೧೨ ಮೈಲುಗಳ ವರೆಗೆ ಜೆಕ್ಕರ ವಿಮಾನಗಳು ಹಾರಿದುವೆಂದು ಹೇಳುತ್ತಿದ್ದಾರೆ. ರಾಜೀಪ್ರಸ್ತಾಪವು ಯಶಸ್ವಿಯಾಗದಿದ್ದರೆ "ಜೆಕ್ಕರು ಅನ್ಯಾಯ ಮಾಡಿದರೆ"ಂದು ಹೇಳುವುದೊಂದೇ ಬಾಕಿಯಿದೆ. ಬ್ರಿಟಸಿನ ನಾರದರು ತಂಬೂರಿ ಬಾರಿಸುತ್ತಾ ಬಂದಂತೆ ಹಿಂದೆ ಹೋಗುವರೋ ನೋಡಬೇಕಾಗಿದೆ.

. . . . . . .

## ಇಲಿಯ ಭವಿಷ್ಯದ ಕುರಿತು ಬೆಕ್ಕಿನ ಯೋಚನೆ.

ಅಜ್ಜಿ ಹೇಳಿದ ಕತೆಯಂತೆ ಇಲಿಯ ಭವಿಷ್ಯದ ಕುರಿತು ಬೆಕ್ಕು ಯೋಚಿಸುತ್ತಿದೆಯಂತೆ. ಇಂಗ್ಲೆಂಡಿನ ರಾಜನೀತಿಜ್ಞರು ಭಾರತಕ್ಕೆ ಸಂಯುಕ್ತ ಘಟನೆ - ಅಂದರೆ ಫೆಡರೇಶನ್ ಅನ್ನುತ್ತಾರಲ್ಲಾ - ಅದರ ಕುರಿತು ಬಹಳೇ ಯೋಚಿಸುತ್ತಿದ್ದಾರಂತೆ. ನಮ್ಮ ಭಾರತದ ಆಂದೋಲನದವರ ಮನಸ್ಸನ್ನು ಮೆಚ್ಚಿಸಿ ಮೆಲ್ಲನೆ ಫೆಡರೇಶನಿನ ಬಲೆಯನ್ನು ಬಿಸಾಡಿಬಿಡುವಾ ಎಂಬೊಂದೇ ಯೋಚನೆ ಅವರನ್ನು ಬಾಧಿಸುತ್ತಿದೆಯಂತೆ. ಬ್ರಿಟಿಷ್ ರಾಜನೀತಿಜ್ಞರಿಗೆ

ನಾರದರು ಕೆಲವು ವರುಷಗಳ ತನಕ ಚಾಣಾಕ್ಷತೆಯನ್ನು ಕಲಿಸಿದ್ದಾರೆಂದು ವಿಚಿತ್ರ ಪುರಾಣದಲ್ಲಿ ಹೇಳಿದೆ. ಪ್ರಾಯಶಃ ಆ ವಿದ್ಯೆಯನ್ನು ಬ್ರಹ್ಮ ಇಲಿಯ ಮೇಲೆ ಇಂಗ್ಲೆಂಡಿನ ಬೆಕ್ಕು ಪೂರ್ಣವಾಗಿ ತೋರಿಸಲೂ ಬಹುದು. ಅಲ್ಲಿಯ ಮೆಂಚೆಸ್ಟರ್ ಗಾರ್ಡಿಯನ್ ಪತ್ರಿಕೆಗನುಸಾರವಾಗಿ ಕಾನ್‌ಸ್ಟಿಟ್ಯೂಯೆಂಟ್ ಎಸೆಂಬ್ಲಿ-ಅಂದರೆ ಬ್ರಿಟಿಷರಿಗೆ ಏನು ಕರುಣೆ! ಮಾಯಾ ಮೀಮಾಂಸೆಯ ಪ್ರತಿಪಾದಕರಾದ ಝಟ್ಲೆಂಡ್ ದೊರೆಗಳು ಪ್ರಾಂತಿಕ ಸ್ವಾಯತ್ತೆಯಂತೆಯೇ ಈ ಸಂಯುಕ್ತ ಘಟನೆಯನ್ನು ಭಾರತೀಯರ ಮೇಲೆ ಹೊರಿಸುವುದರಲ್ಲಿದ್ದಾರೆ. ಆದರೆ ಅದಕ್ಕಿರುವ ಈಗಿನ ವಿರೋಧವು ಝಟ್ಲೆಂಡರ ಮಾಯೆಯನ್ನು ಭಾರತದ ಮಾಯೆಯೊ

## ನಮ್ಮ ಚಿತ್ರಕಾರರ ದೃಷ್ಟಿಯಲ್ಲಿ



ಸ್ಟಾನ್ ಲಾರೆಲ್.



ಒಲಿವರ್ ಹಾರ್ಡಿ.

ಜನತೆಯನ್ನು ನಗಿಸುವುದೇ ಇವರ ಧ್ಯೇಯವಾಗಿರಬೇಕು. ಇವರಿಬ್ಬರು ನಟಿಸಿದ ಪ್ರತಿಯೊಂದು ಚಿತ್ರದಲ್ಲಿಯೂ ವಿನೋದಕ್ಕೆ ಪ್ರಾಧಾನ್ಯತೆ. ಪ್ರಾಯಶಃ ಲಾರೆಲನು ನಕ್ಕು ನಕ್ಕು ದಪ್ಪವಾಗಿ ಬೆಳೆದಿರಬೇಕು. ಹಾರ್ಡಿಯು ಮರುಗಿ ಮರುಗಿ ಕೃಶವಾಗಿರಬೇಕು.

ಸಮಗ್ರ ಭಾರತದ ಪ್ರಜಾಪ್ರತಿನಿಧಿ ಸಭೆಗೆ ಎರಡು ತೊಡಕುಗಳಿವೆಯಂತೆ. ಒಂದನೆಯದಾಗಿ ಹದಿನೆಂಟು ವರುಷ ವಯಸ್ಸಾದವರಿಗೆಲ್ಲಾ ಮತದಾನ ಹಕ್ಕುಕೊಟ್ಟರೆ ಚುನಾವಣೆ ನಡೆಸಲು ಸಾಧ್ಯವಿಲ್ಲವೆಂಬುದು; ಎರಡನೆಯದಾಗಿ ಕಾನ್‌ಸ್ಟಿಟ್ಯೂಯೆಂಟ್ ಎಸೆಂಬ್ಲಿಯಲ್ಲಿ ಸರ್ವಸಮ್ಮತದ ಒಂದು ಘಟನೆಯು ತಯಾರಾಗದೆಂಬುದು. ಏನು ಭವಿಷ್ಯವಿದು? ಇಂಗ್ಲೆಂಡಿನಲ್ಲಿ ಒಗ್ಗಟ್ಟೇ ಒಗ್ಗಟ್ಟು! ಎಂಥ ಘಟನೆಗೂ ಸರ್ವಸಮ್ಮತಿ! ಭಾರತೀಯರ ಮೇಲೆ ಳಗೆ ಸಿಲುಕಿಸಿ ಬಿಡುವುದರಲ್ಲಿದೆ. ಈಗ ಝಟ್ಲೆಂಡ್ ಪ್ರಭುಗಳು "ಮಾಯಾ ಮಂತ್ರಜಾಲ ಸೃಷ್ಟಿಯೂ ...." ಎಂದು ಪದಹೇಳುತ್ತಿರುವರಂತೆ. ಈ ಪದಕ್ಕೆ ನಮ್ಮಲ್ಲಿ ಕೆಲವು ಆಳಿಂಬಿಗಳು ತಾಳ ಹಾಕುತ್ತಿವೆ! ಒಟ್ಟಾರೆ ಮಾಯೆಯಪ್ಪಾ, ಮಾಯೆ!

. . . . . . .

## ಕರಡಿ-ಕೋತಿಗಳ ಯುದ್ಧ!

ಕಲಿಯುಗದಲ್ಲಿ ಅನಾಹುತಗಳಾಗಲಿವೆಯೆಂದು ನನ್ನ ಮುತ್ತಜ್ಜ ಹೇಳಿರುವುದು ನೆನಸಿಗೆ ಬರುತ್ತದೆ. ಈಗ ನೋಡುವಾಗ ಅವಳು ಎಷ್ಟುತ್ತರ ಹುಚ್ಚಿಯಾಗಿದ್ದಿಲ್ಲವೆಂದು ಸ್ಪಷ್ಟವಾಗುತ್ತಿದೆ. ರಷ್ಯಕ್ಕೂ ಜಪಾನಿಗೂ ಖಾಡಾ ಖಾಡಿ ಯುದ್ಧ. ಚೆಂಗ್-ಕು ಫೆಂಗ್ ಎಂಬೊಂದು ಗ್ರಾಮ! ಈ ಗ್ರಾಮವು ರಷ್ಯ-ಜಪಾನುಗಳ ಗಡಿನಾಡು. ಅಲ್ಲಿ ಪ್ರಾರಂಭವಾಯಿತು ಯುದ್ಧ. ಈಗ ವಿಮಾನಗಳು ಬಾಂಬೆಸೆಯುತ್ತಿವೆ, ಗುಂಡುಗಳು ಹಾರುತ್ತಿವೆ. ಜನರು ಹೆಗ್ಗಣಗಳಂತೆ ಸಾಯುತ್ತಿದ್ದಾರೆ. ಇಷ್ಟರ ತನಕ ಕೂಗಿ-ಕಿರಿಚುತ್ತಿದ್ದ ಕರಡಿ ಕೋತಿಗಳು ಈಗ ಹೊಡೆದುಕೊಳ್ಳಲಾರಂಭಿಸಿವೆ. ಕರಡಿ ರಷ್ಯವು ಬಲಶಾಲಿ. ಕೋತಿ ಚಿಕ್ಕ ಜಪಾನ್. ಒಂದು ಕೈಯಲ್ಲಿ ಚೀನದವರಿಗೆ ಪೆಟ್ಟು ಕೊಡುತ್ತಿರಬೇಕು. ಮತ್ತೊಂದು ಕೈಯಲ್ಲಿ ಕರಡಿಯೊಡನೆ ಹೋರಾಡಬೇಕು: ಪಾಪ, ಜಪಾನ್ ಕೋತಿಯು ಏನು ಮಾಡುವುದೆಂದು ಹೇಳಲಾಗುವುದಿಲ್ಲ.

. . . . . . . .

## "ಗುಟ್ಟಿನ ಚಾಣಾಕ್ಷತೆ"

ಕಟ್ಟಕಡೆಗೆ ಹೇಳಿಯೇ ಬಿಟ್ಟರು ಭಾಯಿ ಯಂ. ಯನ್. ರಾಯರು. ಡಾ| ಖರೆಯವರು ಮೊನ್ನೆ ಮೊನ್ನೆ ಕಾಂಗ್ರೆಸ್ ಅಧಿಕಾರಿಗಳ ಮೇಲೆ ಹೊರಿಸಿದ ದೂರನ್ನು ವಿಚಾರಣೆ ಮಾಡಲೇ ಬೇಕೆಂದು ರಾಯರು ಹೇಳಿದ್ದಾರೆ. ಇವರು ಸ್ವಲ್ಪ ಧೈರ್ಯದ ಜನ. ಹೃದಯದಲ್ಲಿದ್ದುದನ್ನು ಹೇಳಿಯೇ ಬಿಡುತ್ತಾರೆ. ಡಾ| ಖರೆಯವರು ಸ್ವಾತಂತ್ರ್ಯ ದಿನಾಚರಣೆ ಮಾಡಲು ಆ ದಿನ ರಜೆಯನ್ನಾಗಿ ಮಾಡಬೇಕೆಂದು ಪಾರ್ಲಿಮೆಂಟರಿ ಬೋರ್ಡಿಗೂ ಪ್ರಾಂತಿಕ ಕಾಂಗ್ರೆಸ್ ಪ್ರಧಾನರುಗಳಿಗೂ ಬರೆದಿದ್ದರಂತೆ. ಅವರು ಇದನ್ನು ಲಕ್ಷಿಸಲೇ ಇಲ್ಲವಂತೆ. ಹಾಗಾದರೆ—ಘಟನೆಯನ್ನು ಮಣ್ಣುಗೂಡಿಸುವ ಆ ದೃಢ ನಿರ್ಧಾರವು ಎಲ್ಲಿ ಹೋಯಿತು? ಇದು ನಿಜವಾಗಿ ಕಾಂಗ್ರೆಸಿಗೆ ವಿರುದ್ಧವಾದ ಮನೋವೃತ್ತಿ. ಕಾಂಗ್ರೆಸ್ ಠರಾವನ್ನು ಧಿಕ್ಕರಿಸಿದ ಒಂದು ಸ್ಪಷ್ಟ ನಿದರ್ಶನ. ಈ ಗುಟ್ಟುಗಳೆಲ್ಲಾ ರಟ್ಟಾಗಬೇಕಾದರೆ ಭಾಯಿ ಯಂ. ಯನ್. ರಾಯರನ್ನುವಂತೆ ಒಂದು ವಿಚಾರಣೆಯಾಗಬೇಕು. ಧುರೀಣರು ತಪ್ಪುಮಾಡಿದರೆ ಅದಕ್ಕೆ ಶಿಕ್ಷೆಂದು

ಹೇಳುವುದಿಲ್ಲವೆ? ಹೇಳಲೇ ಬೇಕು. ಈ ತರದ "ಗುಪ್ತ ಚಾಣಾಕ್ಷತೆ"ಯು ನಡೆಯುತ್ತಾ ಬಂದರೆ ಕಾಂಗ್ರೆಸಿಗೆ ನಿಜವಾಗಿಯೂ ಕ್ಷೇಮವಿಲ್ಲ. ಆದರೆ "ಇದ್ದುದನ್ನು ಇದ್ದಂತೆ ಹೇಳಿದರೆ ಕೆಂಡದಂತೆ ಕೋಪ' ಎಂಬ ಗಾದೆಯಂತೆ ನಮ್ಮ ಛಾಯಿೂ ರಾಯರ ಮಾತು ಕಾಂಗ್ರೆಸಿನ "ದೊಡ್ಡಣ್ಣ"ನವರಿಗೆ ಅಷ್ಟೊಂದು ರುಚಿಸಲಿಕ್ಕಿಲ್ಲ!

. . . . . . .

## ದಯಾಳು ಸರಕಾರ!

ನಮ್ಮ ಬ್ರಿಟಿಷ್ ಸರಕಾರದವರು ಭಾರತದ ಯೋಗಕ್ಷೇಮದ ಕುರಿತು ಯೋಚಿಸುವುದು ಇತ್ತೀಚೆಗೆ ಹೆಚ್ಚುತ್ತಾ ಬಂದಿದೆ. ನಮ್ಮನ್ನು ರಕ್ಷಿಸಲಿಕ್ಕೆ ಸೈನ್ಯಬೇಕಂತೆ ಈಗ ನಮ್ಮಿಂದ ತೆಗೆದುಕೊಳ್ಳುತ್ತಿರುವ ೪೫ ಕೋಟಿ ರೂಪಾಯಿಗಳು ಈಗಿರುವ ಸೈನಿಕರಿಗೆ ಸಾಕಾಗುವುದಿಲ್ಲವಂತೆ. ಪಾಪ, ಜನರು ಸತ್ತರೂ ಸೈನಿಕರು ತಿಂದುಂಡು ಬದುಕಿ ಕೊಳ್ಳಬೇಕಲ್ಲವೇ? ಹೇಗಾದರೂ ಭಾರತ ರಕ್ಷಣೆಯಾಗಬೇಕು. ಮಹಾಯುದ್ಧ ಕಾಲದಲ್ಲಿ ಯುರೋಪಿನ ಯುದ್ಧರಂಗದಲ್ಲಿ ಭಾರತ ರಕ್ಷಣೆಯಾಯಿತು. ಈ ಬಾರಿ ಕೂಡಾ "ಭಾರತ ಸಂರಕ್ಷಣೆ"ಯು ಯುರೋಪಿನಲ್ಲಿಯೇ ನಡೆಯಬಹುದು. ನಮ್ಮ ಜನರು ಇನ್ನೂ ೪೫ ಕೋಟಿ ಕೊಡುವುದರ ಬದಲು ಅದಕ್ಕೆ ವಿರೋಧಿಸುತ್ತಿದ್ದಾರೆ. ದಯಾಳು ಸರಕಾರವು ನಕ್ಕು ಸೊಗಸಾಗಿ ನಾವು ಸಾಯುತ್ತಿರುವುದನ್ನು ನೋಡುತ್ತಿರುವಾಗ ಹೀಗೆವಿರೋಧಿಸುವುದೆ? ಹೇಗೂ ಇರಲಿ. ಸಂರಕ್ಷಣಾ ಖಾತೆಯ ಪ್ರಮುಖರಾದ ಸರ್ ಪವೋ ವೆನ್ಸಿಯವರೂ ಆರ್ಥಿಕ ಸಲಹೆಗಾರರಾದ ಮಿ। ರೌಲೆಂಡ್ಸ್ ರವರೂ ಭಾರತಕ್ಕೆ ಬಂದು ಈ ಕುರಿತು ಚರ್ಚಿಸುತ್ತಾರಂತೆ. ಭಾರತೀಯರಿಗೆ ಮತ್ತೇನನ್ನೂ ಮಾಡಲು ಸಾಧ್ಯವಿಲ್ಲ. ಎಲ್ಲಾ ಮಸೀದಿ, ದೇವಸ್ಥಾನಗಳಲ್ಲಿ "ಪರಮಾತ್ಮ, ಈ ಸೈನ್ಯದ ಖರ್ಚಿನಿಂದ ನಮ್ಮನ್ನು ರಕ್ಷಿಸು" ಎಂದು ಪ್ರಾರ್ಥಿಸುವುದೊಂದೇ ಉಳಿದಿದೆ.

## ಸ್ವೀಕಾರ

ಸಣ್ಣಕತೆಗಳಿಗಾಗಿ ಮೀಸಲಾಗಿರಿಸಿದ "ಕಥಾವಳಿ" ಯೆಂಬ ಕನ್ನಡ ಮಾಸಪತ್ರಿಕೆಯ ೨ನೆ ಸಂಚಿಕೆಯು ನಮ್ಮ ಕೈಸೇರಿದೆ. ಶ್ರೀ. ಒಬಿಟ್ಟು ವೆಂಕಟ್ಟ ನಾರಾಯಣ ಗುಪ್ತರ ಸಂಪಾದಕತ್ವದಲ್ಲಿ ಇದು ಬಳೇಪೇಟೆ ಬೆಂಗಳೂರಿನಿಂದ ಹೊರಡುತ್ತಿದೆ. ಬಿಡಿಸಂಚಿಕೆಯ ಬೆಲೆ ಒಂದಾಣೆ. ವಾರ್ಷಿಕ ಚಂದಾ ಒಂದು ರೂಪಾಯಿ. ಪತ್ರಿಕೆಯ ಹೊರಮೈ ಮತ್ತು ಒಳಮೈ ಸಾಮಾನ್ಯವಾಗಿವೆ. ಕತೆಗಳಲ್ಲಿ ಅಭಿರುಚಿಯಿರುವವರ ಪ್ರೋತ್ಸಾಹವು ಇದಕ್ಕೆ ಸಲ್ಲಬೇಕಾಗಿದೆ.

# ಕಣ್ಮರೆಯಾದ ಸೂರಪ್ಪಯ್ಯನವರು

**ಸರಳ ಸ್ವಭಾವದ ತರುಣ.**

ಅರಿನಗೆಯ ಮುಖ, ದೃಢ ನಿರ್ಧಾರವನ್ನು ಸೂಚಿಸುವ ಕಣ್ಣುಗಳು, ಅಚ್ಚ ಬಿಳಿ ಖಾದಿಯ ಧೋತಿ, ಜುಬ್ಬ ಮತ್ತು ಟೊಪ್ಪಿಯಿಟ್ಟುಕೊಂಡಿದ್ದ ಸರಳ ಸ್ವಭಾವದ ತರುಣ ಸೂರಪ್ಪಯ್ಯನವರನ್ನು ನಾನು ಮೊದಲ ಬಾರಿ ಕಂಡದ್ದು ಮಂಗಳೂರಲ್ಲಿ ಪ್ರಾಂತೀಯ ರಾಜಕೀಯ ಪರಿಷನ್ಮಂಟಪದಲ್ಲಿ. ಅವಿಶ್ರಾಂತವಾಗಿರುವುದು ಅವರ ಜೀವನದೊಂದು ವೈಶಿಷ್ಟ್ಯವಾಗಿತ್ತು.

. . . . . .

**ಸತ್ಯಾಗ್ರಹದ ಕರೆ**

ಎರಡನೆಯ ಸತ್ಯಾಗ್ರಹ ಸಮರದ ರಣಭೇರಿಯನ್ನು ಕೇಳಿ ಪ್ರೌಢ ವಿದ್ಯಾಭ್ಯಾಸಕ್ಕೆ ತಿಲಾಂಜಲಿಯನ್ನಿತ್ತು, ಬಂಧು-ಬಾಂಧವರ ತಡೆಯನ್ನು ಲೆಕ್ಕಿಸದೆ ಸತ್ಯಾಗ್ರಹರಂಗಕ್ಕೆ ಧುಮಿಕಿ ಅರ್ಧ ವರುಷದ ತನಕ ಅಂದಿನ ಸರಕಾರದ "ಅತಿಥಿ" ಗಳಾಗುವ ಭಾಗ್ಯವು ಸೂರಪ್ಪಯ್ಯನವರದಾಗಿತ್ತು.

. . . . . .

**ವಿದ್ಯಾರ್ಥಿ ಸಂಘದ ಜನಕ**

ಒಗ್ಗಟ್ಟಿನ ಬೀಜವು ಚಿಕ್ಕಂದಿನಲ್ಲೇ ಮೊಳೆಯಬೇಕು. ಕಿರಿತನದ ಮೈತ್ರಿಯೇ, ಮುಂದಿನ ಐಕ್ಯಸಾಧನೆಗೆ ಪ್ರಥಮ ಸೋಪಾನವೆಂಬುದನ್ನು ಸೂರಪ್ಪಯ್ಯನವರು ಅರಿತಿದ್ದರು. ಆದುದರಿಂದಲೇ ದಕ್ಷಿಣ ಕನ್ನಡದಲ್ಲಿ ಅವರು ವಿದ್ಯಾರ್ಥಿ ಸಂಘವನ್ನು ಸ್ಥಾಪಿಸಿದರು ಅವರು ಬಿತ್ತಿದ ಬೀಜವು ಸಸಿಯಾಗಿ ಇಂದು ಹೂ ಬಿಟ್ಟಿದೆ. ವಿದ್ಯಾರ್ಥಿ ಸಂಘವು ಈಗ ತನ್ನ ಅಸ್ತಿತ್ವವನ್ನು ಮಂಗಳೂರಲ್ಲಿ ತೋರಿಸುತ್ತಿದೆ.

. . . . . .

**ಕಾಂಗ್ರೆಸಿನ ಸೇನಾನಿ**

ಸೂರಪ್ಪಯ್ಯನವರು ನಮ್ಮ ಜಿಲ್ಲೆಯ ಯುವಕರಿಗೆ ಸ್ಫೂರ್ತಿಯನ್ನು ಕೊಡುವವರಾಗಿದ್ದರು. ಕಾಂಗ್ರೆಸಿನ ಶ್ರೇಯಸ್ಸೇ ಅವರ ಸಾರ್ವಜನಿಕ ಜೀವನದ ಧ್ಯೇಯವಾಗಿತ್ತು. ಎಲ್ಲಾ ಚುನಾವಣೆಗಳಲ್ಲಿ ಅವರು ಕಾಂಗ್ರೆಸಿಗಾಗಿ ತಮ್ಮ ಕೈಲಾದ ಯತ್ನ ಮಾಡಿದ್ದಾರೆ. ಎಸೆಂಬ್ಲಿ ಚುನಾವಣಾ ಕಾಲದಲ್ಲಿ ಸೂರಪ್ಪಯ್ಯನವರೂ, ಅವರ ಧರ್ಮಪತ್ನಿಯೂ ಮಾಡಿದ ಕೆಲಸವು ಚಿರಸ್ಮರಣೀಯವಾಗಿದೆ. ತನ್ನ ಅವಸಾನ ಕಾಲದ ತನಕ ಅವರು ಪ್ರಸಿದ್ಧಿಗೆ ಮರುಳಾಗದೆ ಶಾಂತವಾಗಿ ಕೈಲಾದ ಕೆಲಸವನ್ನು ಮಾಡುತ್ತಿದ್ದರು. "ಕುಂದಾಪುರ ತಾಲೂಕಿನಲ್ಲಿ ಸೂರಪ್ಪಯ್ಯನವರಿದ್ದಾರೆ" ಎನ್ನುವುದು ಒಂದು ವಾಡಿಕೆಯಾಗಿತ್ತು. ಮೊನ್ನೆಯಲ್ಲದೆ ಅದರಿಂದ ಹಿಂದಿನ ವರುಷ ನಡೆದ ಜಿಲ್ಲಾ ಬೋರ್ಡು ಚುನಾವಣೆಗೆ ಅವರು ಕಾಂಗ್ರೆಸಿನ ಪರವಾಗಿ ನಿಂತರೂ ಕಾರಣಾಂತರಗಳಿಂದ ಸೋತು ಹೋದರು. ಕಾಂಗ್ರೆಸಿಗಾದ ಆ ಸೋಲಿನ ಅಪಕೀರ್ತಿಯನ್ನು ಅಳಿಸಿಬಿಡಬೇಕೆಂಬ ಇಚ್ಛೆಯಿಂದ ಸೂರಪ್ಪಯ್ಯನವರು ತನ್ನ ಉಮೇದ್ವಾರಿಕೆಯನ್ನು ಸೂಚಿಸಿದ್ದರು. ಆದರೆ ಜಿಲ್ಲಾ ಕಾಂಗ್ರೆಸ್ ಕಮಿಟಿಯವರು ತಮ್ಮ ಸ್ವಂತ ಕಾರಣಗಳಿಂದಾಗಿ ಅದೇಕೋ ಅವರನ್ನು ಆರಿಸಲಿಲ್ಲ. ಆ ಬಳಿಕ ಕಮಿಟಿಗೂ ಅವರಿಗೂ ನಡೆದ ಪತ್ರ ವ್ಯವಹಾರವು ಸರ್ವವಿದಿತವಾಗಿದೆ.

. . . . . .

**ದಿ. ಕಾರ್ನಾಡು ಸದಾಶಿವ ರಾಯರಂತಾದರು**

ದೇಶಭಕ್ತ ಕಾರ್ನಾಡು ಸದಾಶಿವ ರಾಯರು ತನ್ನ ಅವಸಾನ ಕಾಲದಲ್ಲಿ ಎಸೆಂಬ್ಲಿ ಸದಸ್ಯತನಕ್ಕೆ ತನ್ನ ಉಮೇದ್ವಾರಿಕೆಯನ್ನು ಸೂಚಿಸಿದಂತೆಯೇ ಸೂರಪ್ಪಯ್ಯನವರೂ ತನ್ನ ಕೊನೆಯ ಉಮೇದ್ವಾರಿಕೆಯ ಸೂಚನೆಯನ್ನು ಕಾಂಗ್ರೆಸ್ ಸಮಿತಿಯ ಮುಂದಿಟ್ಟರು. ಎರಡು ಸೂಚನೆಗಳೂ ಒಂದೇ ಪರಿಣಾಮವನ್ನು ಹೊಂದಿದುವು. ಸೂರಪ್ಪಯ್ಯನವರನ್ನು 'ಕ್ಯಾನ್ಸರ್' ಎಂಬ ರೋಗವು ಪೀಡಿಸಿದುದರಿಂದ ಚಿಕಿತ್ಸೆಗಾಗಿ ಅವರು ಮದ್ರಾಸಿಗೆ ಹೋದರೂ ಪರಿಸ್ಥಿತಿಯು ಕಠಿನವಾದುದರಿಂದ ಮಂಗಳೂರಿಗೆ ಹಿಂತಿರುಗಿ ಕಳೆದ ತಾ. ೧೧ರಂದು ಅವಸಾನವನ್ನೈದಿದರು. ದಕ್ಷಿಣ ಕನ್ನಡವು ಇವರ ನಿಧನದಿಂದಾಗಿ ವಿನೀತ ಭಾವದ ಯಥಾರ್ಥ ಕೆಲಸಗಾರರೊಬ್ಬರನ್ನು ಕಳೆದುಕೊಂಡಿತು. ದಿವಂಗತ ಹಲ್ಸನಾಡು ಸೂರಪ್ಪಯ್ಯನವರ ಆತ್ಮಕ್ಕೆ ಶಾಂತಿ ದೊರಕಲಿ!

—"ತರುಣ".

# ಜಿಲ್ಲಾ ಸಂಚಾರಿಯ ಡೈರಿಯಿಂದ




ಕಟ್ಟಕಡೆಗೆ ನಡೆಯಿತು ಮಂಗಳೂರಲ್ಲಿ ಚೀನಾದಿನಾಚರಣೆ. ಪ್ರಕೃತಿಗೂ ಚೀನದೊಡನೆ ಅಷ್ಟು ಕೋಪವೇ. ರಾಷ್ಟ್ರವಿಡೀ ಚೀನಾ ದಿನವನ್ನು ಆಚರಿಸುವಾಗ ಮಂಗಳೂರಿನ ಮೈದಾನಿನಲ್ಲಿ ಭಾರೀ ಮಳೆ ಬಂದಿತ್ತಂತೆ. ಮಳೆಯ ತೊಂದರೆಯಿಂದಾಗಿ ಚೀನಾದಿನಾಚರಣೆ ಮಾಡಲಿಲ್ಲವೆಂದು ಒಬ್ಬ ಕಾಂಗ್ರೆಸ್ ಅಧಿಕಾರಿಗಳು ಸಭೆಯಲ್ಲಿ ಹೇಳಿದರು. ಅದೇ ದಿನ ವಿದ್ಯಾರ್ಥಿಗಳು ಕೂಡಾ ಚೀನಾದಿನವನ್ನು ಆಚರಿಸಿಯೇ ಬಿಟ್ಟಿದ್ದರೆಂದು ಸಭೆಗೆ ಬಂದಿದ್ದ ಒಬ್ಬ ವಿದ್ಯಾರ್ಥಿ ಹೇಳಿದ. ಹೌದು. ಹುಡುಗರಿಗೆ ಮಳೆಯ ಗೊಡವೆಯಿದೆಯೇ. ದೊಡ್ಡವರು ಚಿಕ್ಕವರಂತಲ್ಲ. ಧುರೀಣರು ಸ್ವಯಂಸೇವಕರಂತಲ್ಲ. ಆಗಲಪ್ಪಾ, ವಾಡಿಕೆಯಂತೆ ಒಂದು ಚೀನಾದಿನವು ಆಚರಿಸಲ್ಪಟ್ಟಿತು. ಚಿಯಾಂಗ್ ಕೈ ಶೇಕರಿಗೆ ಈ ಸುದ್ದಿ ಕೇಳಿ ಪರಮಾನಂದವಾಗಿರಬಹುದು!

೦೦ ೦ ೦೦

ಈ ದಿನಗಳು ಒಂದರ ಹಿಂದೊಂದೆಂಬಂತೆ ಬಂದು ಸಿಕ್ಕಿದವರಿಗೆಲ್ಲಾ ಉಪದ್ರ. 'ಚೀನಾದಿನಾಚರಣೆ'. ಯಾಗಿ ಒಂದೆರಡು ದಿನವಾಗಲಿಲ್ಲ. ಬಂತು, 'ತಿಲಕದಿನಾಚರಣೆ' ದಿನಾಚರಣೆ ಮಾಡಿ ಮಾಡಿ ಬೇಸತ್ತಿದ್ದಾರೆ ನಮ್ಮ ಜಿಲ್ಲೆಯವರು. ತಿಲಕರು 'ಲೋಕಮಾನ್ಯ'ರಾದರೆ ಅದು ೧೯೨೦ರ ತನಕ. ಈಗೇಕೆ ಗೊಂದಲಮಾಡಬೇಕು ಆ ವಿಚಾರ-ಎಂದು ನಮ್ಮಲ್ಲಿ ಯಾರಾದರೂ ಹೇಳಿ ಬಿಡಬಹುದು. ಹೀಗಿದೆ ಪರಿಸ್ಥಿತಿ. ಇನ್ನೊಂದು ವಿಚಾರವಿರಬಹುದು. ನಮ್ಮ ಜಿಲ್ಲೆ "ಸಮತಾವಾದಿ" ಜಿಲ್ಲೆಯಾದುದರಿಂದ ಈ ಹಳೆ ಧುರೀಣರ ದಿನವಾಚರಿಸುವದಿಲ್ಲ. ಮುಂದೆ ಕಾರ್ಲ್‌ಮಾರ್ಕ್ಸ ದಿನಾಚರಣೆ, ಲೆನಿನ್ ದಿನಾಚರಣೆ ಮೊದಲಾದುವುಗಳನ್ನು ಆಚರಿಸಬಹುದು. ಹೀಗಾದರೆ, ಕೇವಲ ಧ್ಯೇಯ ಭೇದವಲ್ಲದೆ ಆಲಸ್ಯದಿಂದ ಸುಮ್ಮನಾದುದಲ್ಲವೆಂದಾಯಿತು!

೦೦ ೦ ೦೦

ಜಿಲ್ಲೆಯಲ್ಲಿ ಎಲ್ಲಿ ಸಂಚರಿಸಿದರೂ ವಿಶೇಷವೇನೂ ಇಲ್ಲ. ಇದಕ್ಕೆ ಕಾರಣವಿದೆ ಚುನಾವಣೆಯಿಲ್ಲ, ಕಾಂಗ್ರೆಸ್ ಚುನಾವಣೆಯಿಲ್ಲ, ದಿನಾಚರಣೆಗಳು ಮೊದಲೇ ಇಲ್ಲ. ಶಿಸ್ತುಜಾರಿಗಳು ಕೂಡಾ ಇಲ್ಲ. ನಿಶ್ಶಬ್ದ, ನೀರವ! ಪ್ರಾಯಶಃ ಯಾರಿಗೂ ಕಾಣದಂತೆ ಎಲ್ಲರೂ ಶಾಂತವಾಗಿ ಕೆಲಸ ಮಾಡುತ್ತಿದ್ದಾರೆಂದು ತೋರುತ್ತದೆ.

೦೦ ೦ ೦೦

ಈ ಬಾರಿ ಕಾಂಗ್ರೆಸ್ ಸದಸ್ಯರನ್ನೂ ಸೇರಿಸುವ ಗಡಿಬಿಡಿಯೇನೂ ಇಲ್ಲ. ಕಾರಣ? (ಸ್ವಯಂವ್ಯಕ್ತ.) ವಿರೋಧ ಪಕ್ಷವಿದ್ದರಲ್ಲವೆ ಗಡಿಬಿಡಿ. ವಿರೋಧ ಪಕ್ಷವು (ಅಂದರೆ ಗಾಂಧೀ ತತ್ವಾನುಯಾಯಿಗಳ ಪಕ್ಷ) ನಮ್ಮ ಜಿಲ್ಲೆಯಲ್ಲಿ ದಿವಾಳಿಯಾಗಿದೆ. ಆದುದರಿಂದ ತೊಂದರೆಯೇನೂ ಇಲ್ಲ!

—ಜಿಲ್ಲಾ ಸಂಚಾರಿ.

# ಜಾಗೃತ ಭಾರತದಲ್ಲಿ

## ಕಾಂಗ್ರೆಸಿನ ಪುಷ್ಟೀಕರಣ.

ಕಾಂಗ್ರೆಸಿನ ಶಿಸ್ತು, ವ್ಯವಸ್ಥೆ ಮೊದಲಾದುವುಗಳು ಉತ್ತಮವಾಗಿಲ್ಲವೆಂಬುದನ್ನು ಮನಗಂಡು ಮಹಾತ್ಮಾಜಿಯರು ಅದರ ಸುಧಾರಣೆಗಾಗಿ ಶಿವಗಾಂವಿನಲ್ಲಿ ಹೊಸತೊಂದು ಯೋಜನೆಯನ್ನು ತಯಾರಿಸುತ್ತಿದ್ದಾರೆ. ಪಾರ್ಲಿಮೆಂಟರೀ ಕಾರ್ಯಕ್ರಮದಿಂದಾಗಿ ಕಾಂಗ್ರೆಸಿನಲ್ಲಿ ಒಡಕುಗಳುಂಟಾಗಲು ಮೂಲ ಕಾರಣವೆಂದು ತಿಳಿಯಲಾಗಿದೆ. ಇದನ್ನು ಸುಧಾರಿಸುವುದಕ್ಕಾಗಿ ಮಹಾತ್ಮಾಜಿಯವರು ಕಾಂಗ್ರೆಸಿನ ಘಟನೆಯಲ್ಲಿ ಮಹತ್ವದ ಬದಲಾವಣೆಗಳನ್ನು ಮಾಡಿ ವರ್ಕಿಂಗ್ ಕಮಿಟಿಯ ಮುಂದಿಡುವರು. ಅಹಿಂಸಾ ತತ್ವವು ಹಲಕೆಲವರ ತತ್ವವಾಗಿ ಪರಿಣಮಿಸಿರುವುದರಿಂದ ಕಾಂಗ್ರೆಸ್ ರಂಗದಲ್ಲಿರುವವರೆಲ್ಲರೂ ಅದನ್ನು ಪಾಲಿಸಬೇಕೆಂಬ ಅಭಿಪ್ರಾಯವು ಗಾಂಧಿಜಿಯವರಿಂದ ಸ್ಪಷ್ಟೀಕರಿಸಲ್ಪಟ್ಟಿದೆ. ಅಹಿಂಸಾ ವಿಧಾನವನ್ನು ರಾಜ್ಯಭಾರ ಕಾರ್ಯಕ್ಕೆ ಕೂಡಾ ಉಪಯೋಗಿಸಿದರೆ ಈಗ ಆಗುತ್ತಿರುವ ಅನಾಹುತಗಳು ಸಂಭವಿಸದೆ, ಭಾರತವು ಕೇವಲ ಸೈನ್ಯಕ್ಕಾಗಿ ವ್ಯಯಿಸುವ ಸುಮಾರು ೫೦ ಕೋಟಿ ರೂಪಾಯಿಗಳನ್ನು ಜನತೋದ್ಧಾರಕ್ಕಾಗಿ ಉಪಯೋಗಿಸಬಹುದಾಗಿದೆ. ಬರುವ ಸೆಪ್ಟೆಂಬರ ತಿಂಗಳ ತಾ. ೨೦ ರಂದು ವಾರ್ಧದಲ್ಲಿ ನಡೆಯಲಿರುವ ವರ್ಕಿಂಗ್ ಕಮಿಟಿಯ ಸಭೆಯಮುಂದೆ ಗಾಂಧಿಜಿಯವರು ತಮ್ಮ ಯೋಜನೆಯನ್ನು ಇಟ್ಟು ಸಮಸ್ತ ಕಾಂಗ್ರೆಸ್ ಅದನ್ನು ಸ್ವೀಕರಿಸುವಂತೆ ಮಾಡುವರು.

○ ○ ○

## ಡಾ॥ ಖರೆಯವರ ಆರೋಪಗಳು.

ಮಧ್ಯಪ್ರಾಂತ್ಯದ ಮಾಜಿ ಪ್ರಧಾನ ಮಂತ್ರಿಗಳಾದ ಡಾ॥ ಯನ್. ಬಿ. ಖರೆಯವರು ಕಳೆದ ವಾರ ಕಾಂಗ್ರೆಸ್ ಧುರೀಣರ ಮೇಲೆ ಹಲವು ಆರೋಪಗಳನ್ನು ಹೊರಿಸಿದ್ದಾರೆ. ಇವುಗಳು ಸತ್ಯವಾಗಿದ್ದಲ್ಲಿ ಮುಂದೆಂದೂ ಆ ರೀತಿಯಾಗಿ ಯಾರೂ ವರ್ತಿಸದಂತೆ ನೋಡುವುದು ಕಾಂಗ್ರೆಸಿನ ಕರ್ತವ್ಯವಾಗಿದೆ. ಸರ್ದಾರ್ ವಲ್ಲಭಭಾಯಿಯವರಿಗೆ ಖರೆಯವರು ಕೊಟ್ಟ ಉತ್ತರದಲ್ಲಿ-ಅವರು ಪ್ರಧಾನರಾಗಿದ್ದಾಗ ಸ್ವಾತಂತ್ರ್ಯ ದಿನಾಚರಣೆಯಂದು ಎಲ್ಲಾ ಕಾಂಗ್ರೆಸ್ ಪ್ರಾಂತಗಳು ಸಾರ್ವಜನಿಕವಾಗಿ ರಜೆಯನ್ನು ಕೊಡಬೇಕೆಂದು ಬಿನ್ನವಿಸಿಕೊಂಡಿದ್ದರೂ ಇತರರು ಅದನ್ನು ಅಲಕ್ಷಿಸಿದ್ದಾರೆಂದು ಅವರು ಹೇಳಿದ್ದಾರೆ. ಇದು ಸತ್ಯವಾಗಿದ್ದಲ್ಲಿ ಈ ಮನೋಗತಿಯು ಕಾಂಗ್ರೆಸಿಗೆ ಭೂಷಣವಲ್ಲವೆಂಬುದನ್ನು ಎಲ್ಲರೂ ಒಪ್ಪಬೇಕಾಗಿದೆ. ಎರಡನೆಯದಾಗಿ ಕಾಂಗ್ರೆಸ್ ಆಶ್ವಾಸನಾಪತ್ರದಲ್ಲಿದ್ದ ಕ್ರಿಮಿನಲ್ ಕಾಯಿದೆಯ ತಿದ್ದುಪಡಿಯನ್ನು ಅವರ ಪ್ರಾಂತ್ಯದಲ್ಲಿ ಮಾತ್ರ ಮಾಡಿದ್ದಲ್ಲದೆ ಇತರರಾರು ಅದನ್ನು ಕಾರ್ಯರೂಪಕ್ಕೆ ತರಲಿಲ್ಲ ಎಂದೂ ಮುಂಬಯಿಯಂಥ ಕಾಂಗ್ರೆಸ್ ಪ್ರಾಂತ್ಯದಲ್ಲಿ ಕೂಡಾ ಭಡಿಗಳನ್ನು ಕೊಡುವ ನಿಯಮಗಳಿವೆಯೆಂದೂ ಕಾಂಗ್ರೆಸ್ ಧುರೀಣರು ದೀರ್ಘ ಭಾಷಣಗಳನ್ನೀಯುವುದಲ್ಲದೆ ಅವುಗಳನ್ನು ಕಾರ್ಯರೂಪಕ್ಕೆ ತರುವುದಿಲ್ಲವೆಂದೂ ಖರೆಯವರು ಹೇಳಿದ್ದಾರೆ. ಭಾಯಿ ಯಂ. ಯನ್. ರೋಯ್‌ರವರು ಇವುಗಳ ಕುರಿತು ಕೊಟ್ಟ ಹೇಳಿಕೆಯಲ್ಲಿ "ಗುಟ್ಟಿನ ಚಾಣಾಕ್ಷತೆ"ಯ ಯೋಗ್ಯ ವಿಚಾರಣೆಯಾಗಬೇಕೆಂದು ಸೂಚಿಸಿದ್ದಾರೆ.

. . .

## ಸರ್ ವಿಶ್ವೇಶ್ವರಯ್ಯನವರ ಯೋಜನೆ.

ಭಾರತದ ಸುಪ್ರಸಿದ್ಧ ಆರ್ಥಿಕ ತಜ್ಞರಾದ ಸರ್ ಯಂ. ವಿಶ್ವೇಶ್ವರಯ್ಯನವರು ಈಗ ಭಾರತದ ಔದ್ಯೋಗೀಕರಣ ಪ್ರಶ್ನೆಗೆ ಹೆಚ್ಚಿನ ಮಹತ್ವವನ್ನು ಕೊಡುತ್ತಲಿದ್ದಾರೆ. ಏಳು ಪ್ರಾಂತ್ಯಗಳಲ್ಲಿ ಕಾಂಗ್ರೆಸ್ ಸರಕಾರವಿರುವುದರಿಂದ ಇದು ಸಮಯೋಚಿತವಾಗಿದೆಯೆನ್ನಬೇಕು. ಕಾಂಗ್ರೆಸ್ ಅಧ್ಯಕ್ಷರು ಕೂಡಾ ಕಾಂಗ್ರೆಸ್ ಪ್ರಾಂತ್ಯಗಳ ಕೈಗಾರಿಕೆ ಮಂತ್ರಿಗಳ ಸಭೆಯೊಂದನ್ನು ಮುಂಬಯಿಯಲ್ಲಿ ಈಗಾಗಲೇ ಕರೆದಿರುವುದಲ್ಲದೆ ಸದ್ಯದಲ್ಲಿಯೇ ಈ ವಿಚಾರವು ಚರ್ಚಿಸಲ್ಪಡುವುದು. ಮೊನ್ನೆ ಸೇಲಮಿನಲ್ಲಿ ಸರ್ ವಿಶ್ವೇಶ್ವರಯ್ಯನವರು ಕೊಟ್ಟ ಭಾಷಣಕ್ಕನುಸಾರವಾಗಿ ಹೆಚ್ಚಿನ ಭಾರತೀಯರು ಕೃಷಿಯಮೇಲೆ ಹೊಂದಿಕೊಂಡಿರುವುದೇ ಭಾರತದ ದಾರಿದ್ರ್ಯಕ್ಕೆ ಕಾರಣವಾಗಿದೆ. ಯೋಗ್ಯವಾದ

ಔದ್ಯೋಗಿಕ ಯೋಜನೆಯೊಂದಿಲ್ಲದೆ ರಾಷ್ಟ್ರದ ಪರಿಸ್ಥಿತಿಯನ್ನು ಸುಧಾರಿಸಲು ಶಕ್ಯವಿಲ್ಲ. ಕೇಂದ್ರದಲ್ಲಿ ಅಧಿಕಾರವು ಅತ್ಯವಶ್ಯವಾದರೂ ಸಾಮಾನ್ಯಮಟ್ಟಿಗಾದರೂ ಜಿಲ್ಲೆ ಜಿಲ್ಲೆಗಳಲ್ಲಿ ಕೈಗಾರಿಕೆಗಳ ಸುಧಾರಣಾ ಯತ್ನವನ್ನು ಮಾಡಬಹುದು. ಪ್ರತಿಯೊಂದು ಗ್ರಾಮವೂ ತನಗೆ ಬೇಕಾದ ಎಲ್ಲಾ ಸಾಧನಗಳನ್ನು ತಯಾರಿಸಲು ಶಕ್ತವಾಗಿರಬೇಕು. ಈಗಿನ ಗ್ರಾಮ ಪಂಚಾಯತುಗಳು ಸ್ಥಳೀಕ ಸರಕಾರಗಳ ಒಂದು ಚಿಕ್ಕ ಮಾದರಿಯಾಗಿರದೆ ಸಂಬಂಧಪಟ್ಟ ಎಲ್ಲಾ ಸಮಸ್ಯೆಗಳನ್ನು ಸುಲಭದಲ್ಲಿ ಬಿಡಿಸುವಂತಾಗಬೇಕು. ಈ ದೃಷ್ಟಿಯಿಂದ ಒಂದೊಂದೇ ಗ್ರಾಮಗಳಲ್ಲ ಸರಿಯಾದ ವ್ಯವಸ್ಥೆ ಮಾಡುತ್ತಾ ಬಂದರೆ ಜನತೆಯ ಲಕ್ಷ್ಯವು ಔದ್ಯೋಗೀಕರಣದೆಡೆಗೆ ಹರಿಯುವುದು. ಪ್ರಾಂತಿಕ ಸರಕಾರಗಳೂ, ಕಾಂಗ್ರೆಸಿನವರೂ ಈ ಪ್ರಾಮುಖ್ಯ ಪ್ರಶ್ನೆಯ ಕುರಿತು ಯೋಚಿಸಿ, ಸಾಧ್ಯವಾದುದನ್ನು ಕಾರ್ಯರೂಪಕ್ಕೆ ತರಲೆತ್ನಿಸುವುದು ಪ್ರಾಮುಖ್ಯವಾಗಿದೆ.

೦೦೦

## ಕೇಂದ್ರ ವಿಧಾಯಕ ಸಭೆಯಲ್ಲಿ

ಕಳೆದವಾರ ಪ್ರಾರಂಭವಾದ ಕೇಂದ್ರ ವಿಧಾಯಕ ಸಭೆಯಲ್ಲಿ ಮಹತ್ವದ ಹಲವು ಮಸೂದೆಗಳು ಮುಂದೆ ಬರಲಿವೆ. ಕಮ್ಯುನಿಕೇಶನ್ ಮೆಂಬರರಾದ ಮಿ. ಎ. ಜಿ. ಕ್ಲೋರವರು-ಸಂರಕ್ಷಣಾ ವ್ಯಯದ ಕುರಿತು ಅಧಿಕ ಸಂಖ್ಯೆಯಲ್ಲಿ ಜನರು ನಿರರ್ಥಕವಾಗಿ ವಿಮರ್ಶಿಸುವುದರಿಂದ ಕ್ರಿಮಿನಲ್ ಕಾಯಿದೆಯಲ್ಲಿ ಕೆಲವು ತಿದ್ದುಪಡಿಗಳನ್ನು ಮಾಡಬೇಕೆಂಬ ಮಸೂದೆಯನ್ನು ತಂದಿದ್ದಾರೆ. ಸರ್. ಜಿ. ಯಸ್. ಬಜ್ಪೆಯವರು ವಿಮಾನಗಳಿಂದ ವಿದೇಶಗಳಿಂದ ಬರುವರು ತರಬಹುದಾದ ಸಾಂಕ್ರಾಮಿಕ ರೋಗಗಳನ್ನು ತಡೆಯುವ ಒಂದು ಮಸೂದೆಯನ್ನೂ ತರಲಿದ್ದಾರೆ. ಶ್ರೀ. ಅವಿನಾಶಲಿಂಗಮ್ ಚೆಟ್ಟಿಯಾರರು ಇನ್ಶೂರೆನ್ಸ್ ಮೇಲ್ವಿಚಾರಿಯ ಸ್ಥಾನಕ್ಕೆ



**ಮಹಾತ್ಮಾಜಿಯವರು**
ಕಾಂಗ್ರೆಸನ್ನು ಸರ್ವಸಮರ್ಪಕವಾದ ಸಂಸ್ಥೆಯನ್ನಾಗಿ ಮಾಡಲು, ಶಿಸ್ತಿನ ಬಂಧವನ್ನು ಇನ್ನಷ್ಟೂ ಬಿಗಿಯಾಗಿ ಮಾಡುವ ಯೋಗ್ಯ ವ್ಯವಸ್ಥೆಯನ್ನು ತಂದೊಡ್ಡುವ ಘಟನಾತ್ಮಕ ತಿದ್ದುಪಡಿಗಳನ್ನು ಮಾಡಲಾರಂಭಿಸಿದ್ದಾರೆ.

ಐರೋಪ್ಯರೊಬ್ಬರನ್ನು ನೇಮಿಸಿ ಆ ಸವಲತ್ತನ್ನು ಭಾರತೀಯರಿಗೆ ಕೊಡದಿರುವುದಕ್ಕಾಗಿ ಒಂದು ನಿಲುವಳಿ ಸೂಚನೆಯನ್ನು ಮುಂದೆ ತಂದಿದ್ದಾರೆ. ಮಿ. ಅಸಾಫಾಲಿಯವರು 'ಸಂರಕ್ಷಣಾ' ವ್ಯಯವನ್ನು ಭಾರತ ಸರಕಾರವು ಕಡಿಮೆ ಮಾಡದಿದ್ದುದಕ್ಕಾಗಿ ಒಂದು ನಿಲುವಳಿ ಸೂಚನೆಯ ನೋಟೀಸು ಕೊಟ್ಟಿರುತ್ತಾರೆ. ಇವುಗಳಲ್ಲದೆ ಶ್ರೀಮತಿ ರಾಧಾಬಾಯಿ ಸುಬ್ಬರಾಯನರ ಬಹುಪತ್ನಿ ನಿರೋಧ ಮಸೂದೆಯೂ, ಚರ್ಚಿಸಲ್ಪಡುವುದು

೦೦೦

## ಗಡಿನಾಡಿನಲ್ಲಿ

ವಜೀರ್‌ಸ್ಥಾನದಲ್ಲಿ ಇನ್ನೂ ಅವ್ಯವಸ್ಥೆಯು ಕೊನೆಗೊಂಡಿಲ್ಲ. ಸರಕಾರವು ವಿಮಾನಗಳಿಂದ ಬಾಂಬೆಸೆಯುವುದನ್ನು ನಿಲ್ಲಿಸಬೇಕೆಂದು ದೇಶವಿದೇಶಗಳಲ್ಲಿ ಬಿನ್ನಹಗಳಾಗುತ್ತಿರುವುದಿದ್ದರೂ ಈ ಪ್ರಶ್ನೆಯನ್ನು ಶಾಂತವಾಗಿ ತೀರ್ಮಾನಿಸಲು ಸರಕಾರಕ್ಕೆ ಸಾಧ್ಯವಾಗಿಲ್ಲ. ಈ 'ಯುದ್ಧ'ಕ್ಕಾಗಿ ಲಕ್ಷಾಂತರ ರೂಪಾಯಿಗಳು ವ್ಯಯಿಸಲ್ಪಟ್ಟಿವೆ. ಶ್ರೀ. ಸತ್ಯಮೂರ್ತಿಗಳು ಈ ಕುರಿತು ಎಸೆಂಬ್ಲಿಯಲ್ಲಿ ಒಂದು ನಿಲುವಳಿ ಸೂಚನೆಯನ್ನೂ ತಂದಿದ್ದರೂ, ಅದರ ಚರ್ಚೆಗೆ ಅಧ್ಯಕ್ಷರು ಎಡೆಗೊಡದಿರುವುದು ಶೋಚನೀಯವಾಗಿದೆ. ಇತ್ತಂಡದವರಲ್ಲಿಯೂ ಜನರು ಕೊಲ್ಲಲ್ಪಡುತ್ತಾರೆ. ವಜೀರಿಸ್ಥಾನವು ಯುದ್ಧರಂಗದಂತಾಗಿದೆ.

೦೦೦

## ಕಾಂಗ್ರೆಸಿಗೆ
## ಮುಸ್ಲಿಮ ಲೀಗಿನ ಉತ್ತರ.

ಅಖಿಲಭಾರತ ಮುಸ್ಲಿಮ್ ಲೀಗಿನ ಅಧ್ಯಕ್ಷರಾದ ಮಿ| ಎಮ್. ಎ. ಜಿನ್ನಾರವರು ಕಾಂಗ್ರೆಸಿಗೆ ಸಮರ್ಪಕವಾದೊಂದು ಉತ್ತರವನ್ನು ಕಳುಹಿಸಿದ್ದಾರೆ. ಅವರ ಉತ್ತರದ ಸಾರಾಂಶವು ಹೀಗಿದೆ: ಮುಸ್ಲಿಮ್ ಲೀಗಿನೊಡನೆ ಮಹಾತ್ಮರು ಮಾತುಕತೆ ಪ್ರಾರಂಭಿಸಿ

ದ್ದನ್ನು ನೋಡುವಾಗಲೇ ಮುಸ್ಲಿಮ್‌ಲೀಗ್ ಭಾರತದ ಮುಸ್ಲಿಮರ ಏಕಮಾತ್ರ ಸಂಸ್ಥೆಯೆಂದು ಕಾಂಗ್ರೆಸ್ ಭಾವಿಸಿದಂತಾಯಿತು. ಲಕ್ನೋ ಒಪ್ಪಂದದಲ್ಲಿ ಕಾಂಗ್ರೆಸು ಲೀಗನ್ನು ಮುಸ್ಲಿಮರ ಏಕಮಾತ್ರ ಅಧಿಕೃತ ಪಕ್ಷವೆಂದು ಒಪ್ಪಿಕೊಂಡಿದೆ. ೧೯೩೫ರ ತನಕ ಮುಸ್ಲಿಮ್‌ಲೀಗನ್ನು ಗೌರವಿಸಿ, ಈಗ ಅದು ಮುಸಲ್ಮಾನರ ಅಧಿಕೃತ ಸಂಸ್ಥೆಯಲ್ಲವೆನ್ನುವುದು ಅರ್ಥರಹಿತವಾಗಿದೆ. ಬಿಜ್ನೂರಲ್ಲದೆ ಇತರ ಉಪಚುನಾವಣೆಗಳಲ್ಲಿ ಕಾಂಗ್ರೆಸು ಸೋತಿರುವುದು ಮುಸ್ಲಿಮ್ ಲೀಗಿನ ಶಕ್ತಿಯನ್ನು ಪ್ರದರ್ಶಿಸುತ್ತದೆ. ಇವೆಲ್ಲಾ ವಿಚಾರಗಳನ್ನು ನೋಡಿದರೆ ಅದೇ ಮುಸಲ್ಮಾನರ ಸಂಸ್ಥೆಯೆಂದು ವ್ಯಕ್ತವಾಗುತ್ತದೆ.

ಮೊದಲು ದೊಡ್ಡ ವಿಚಾರಗಳ ಕುರಿತು ಒಪ್ಪಿಕೊಂಡಲ್ಲಿ ಚಿಕ್ಕಪುಟ್ಟ ವಿಚಾರಗಳ ಕುರಿತು ತೀರ್ಮಾನ ಮಾಡಲು ಒಂದು ಉಪಸಮಿತಿಯನ್ನು ನೇಮಿಸುವ ವಿಚಾರದಲ್ಲಿ ಅದಕ್ಕೆ ಹಿಂದುಗಳಲ್ಲದೆ ಮುಸ್ಲಿಮ್ ಸದಸ್ಯರನ್ನು ಆರಿಸಬಾರದೆಂದು ಆ ಪತ್ರದಲ್ಲಿ ಹೇಳಲಾಗಿದೆ.

ಕೊನೆಯದಾಗಿ ಕಾಂಗ್ರೆಸ್ ರಾಜಿಯ ಮಾತುಕತೆಗಳ ಬಾಗಿಲನ್ನು ಮುಚ್ಚಿಬಿಡಬಾರದೆಂದು ಸೂಚಿಸಿದೆ.

ೲ ೲ ೲ

## ಕಮ್ಯೂನಿಸ್ಟ್ ಚಳವಳ

ನಮ್ಮ ನಾಡಿನಲ್ಲಿ ಭಾರತದ ಸಂಸ್ಕೃತಿಗೆ ತೀರಾ ಪರಕೀಯನಾದ ಕಮ್ಯೂನಿಸ್ಟ್ ಚಳವಳವನ್ನು ಕೆಲವರು ನಡೆಸುತ್ತಿದ್ದಾರೆಂಬುದು ಮದ್ರಾಸ್ ಸರಕಾರದ ಕೈಗೆ ದೊರಕಿದ ಕೆಲವು ಪ್ರಕಟಣೆಗಳಿಂದ ಸ್ಪಷ್ಟವಾಗುತ್ತದೆಂದೂ, ಇಂತಹ ಪ್ರಚಾರವು ಅಹಿಂಸಾತ್ಮಕ ಚಳವಳಕ್ಕೆ ತಡೆಯನ್ನುಂಟುಮಾಡುವುದೆಂದೂ, ಜನತೆಯು ಈ ಚಳವಳದಲ್ಲಿ ಸೇರುವುದು ವಿಹಿತವಲ್ಲವೆಂದೂ



ಕೇಂದ್ರ ವಿಧಾಯಕ ಸಭೆಯಲ್ಲಿ ಸ್ಥಾಪಿತವಾದ ಹೊಸ ಮುಸ್ಲಿಮ್ ಲೀಗಿನ ಮುಂದಾಳುವಾದ

**ಮಿ| ಎಮ್. ಎ. ಜಿನ್ನರು**

ಇವರ ಪಕ್ಷದ ವಿಚಿತ್ರ "ಚಾಣಾಕ್ಷತೆ" ಯಿಂದಾಗಿ ಪರದೇಶಿಯರಿಗೆ ಇನ್ಶೂರೆನ್ಸ್ ಸುಪರಿಂಟೆಂಡೆಂಟರವರ ಸ್ಥಾನವನ್ನು ಕೊಟ್ಟಿರುವುದರ ಕುರಿತು ಚರ್ಚಿಸಲ್ಪಟ್ಟ ನಿಲುವಳಿ ಸೂಚನೆಯು ಬಿದ್ದುಹೋಯಿತು

ಮದ್ರಾಸ್ ಸರಕಾರದ ಒಂದು ಪ್ರಕಟನೆಯು ಹೇಳುತ್ತಿದೆ.

ೲ ೲ ೲ

## ಡಿಲ್ಲಿ ಪ್ರಾಂತ್ಯದಲ್ಲಿ ಸತ್ಯಾಗ್ರಹ

ಕೇಂದ್ರ ನ್ಯಾಯವಿಧಾಯಕ ಸಭೆಯ ಆಡಳಿತಕ್ಕೊಳಗಾಗಿರುವ ಡಿಲ್ಲಿಯಲ್ಲಿ ಸರಕಾರವು "ಅತ್ಯಾಚಾರ"ವನ್ನು ನಡೆಸಿರುವುದಕ್ಕಾಗಿ ಸತ್ಯಾಗ್ರಹ ಚಳವಳವನ್ನು ಪ್ರಾರಂಭಿಸಲು ಎಡೆಗೊಡಬೇಕೆಂದು ಅಲ್ಲಿಯ ಕಾಂಗ್ರೆಸ್ ಕಾರ್ಯಭಾರಿಗಳು ಅಖಿಲಭಾರತ ಕಾಂಗ್ರೆಸ್ ಕಮಿಟಿಯೊಡನೆ ಕೇಳಿಕೊಂಡಿದ್ದಾರೆ. ಸತ್ಯಾಗ್ರಹವು ಪ್ರಾರಂಭವಾದರೆ ಬಾರ್ದೋಲಿ ಸತ್ಯಾಗ್ರಹದಂತೆ ಅದೂ ಯಶಸ್ವಿಯಾಗುವುದೆಂದೂ ಹಿಸಲಾಗಿದೆ.

ೲ ೲ ೲ

## ಒರಿಸ್ಸದಲ್ಲಿ ಸಾಲನಿವಾರಣಾ ಮಸೂದೆ

ಮದ್ರಾಸಿನಂತೆಯೇ ಒರಿಸ್ಸದಲ್ಲಿಯೂ ಸಾಲನಿವಾರಣಾ ಮಸೂದೆಯು ಜಾರಿಗೆ ಬರುವುದರಲ್ಲಿದೆ. ಅಲ್ಲಿಯ ಪ್ರಧಾನರಾದ ಶ್ರೀ ವಿಶ್ವನಾಥದಾಸರು ಈ ಕುರಿತು ಸರ್ದಾರ್ ವಲ್ಲಭಭಾಯಿಯವರೊಡನೆ ಎಲ್ಲಾ ಮಹಾತ್ಮಾಜಿಯರೊಡನೆಯೂ ವಾರ್ಧಾದಲ್ಲಿ ಮಾತುಕತೆಗಳನ್ನು ನಡೆಸಿದರು.

## ಮಧ್ಯಪ್ರಾಂತ್ಯಕ್ಕೆ ಆರನೆಮಂತ್ರಿ

ಮಧ್ಯಪ್ರಾಂತ್ಯಕ್ಕೆ ಆರನೆ ಮಂತ್ರಿಯನ್ನು ಸೇರಿಸುವ ವಿಚಾರದಲ್ಲಿ ಪ್ರಧಾನ ಮಂತ್ರಿಗಳಾದ ಆರ್. ಎಸ್. ಶುಕ್ಲರು ಮಹಾತ್ಮಾಜಿಯವರ ಅಭಿಪ್ರಾಯವನ್ನು ಕೇಳುತ್ತಿದ್ದಾರೆ.

---

## ಚಿತ್ರವಿಮರ್ಶೆ

ಶ್ರೀ. ಸತ್ಯಮೂರ್ತಿಗಳ ರೇಖಾಚಿತ್ರದಲ್ಲಿದ್ದ ನ್ಯೂನತೆಗಳ ಹಲವು ವಿಮರ್ಶೆಗಳನ್ನು ನಮ್ಮ ವಾಚಕರು ಕಳುಹಿಸುತ್ತಾ ಇದ್ದಾರೆ. ಬಹುಮಾನದ ವಿವರವು ಮುಂದಿನ ವಾರ ಪ್ರಕಟಿಸಲಾಗುವುದು.

# ಅಂತರಂಗ

ಉಡುಪಿ, ಅಗೋಸ್ತು ೧೪, ೧೯೩೮.

## ಕೇಂದ್ರ ವಿಧಾಯಕ ಸಭೆಯು ಕ್ರಿಮಿನಲ್ ತಿದ್ದುಪಡಿ ಮಸೂದೆ

ಕೇಂದ್ರ ನ್ಯಾಯವಿಧಾಯಕ ಸಭೆಯಲ್ಲಿ ಸಂರಕ್ಷಣಾ ಖಾತೆಯ ಕಾರ್ಯದರ್ಶಿಗಳು ತಂದಿರುವ ಕ್ರಿಮಿನಲ್ ಲಾ ತಿದ್ದುಪಡಿ ಮಸೂದೆಯು ಖಂಡನೀಯವಾಗಿದೆ. ಅವರು ಮಾಡಿದ ಭಾಷಣಕ್ಕನುಸಾರವಾಗಿ ಯಾವ ಭಾರತೀಯನೂ ಅನಾವಶ್ಯಕವಾಗಿ ಬ್ರಿಟಿಷ್ ಸಾಮ್ರಾಜ್ಯವು ಮಾಡಬಹುದಾದ ಯುದ್ಧ ಕಾಲದ ಸೈನ್ಯಕ್ಕೆ ಇತರರು ಸೇರದಂತೆ ಪ್ರಚಾರ ಕಾರ್ಯವನ್ನು ನಡೆಸುವವರನ್ನು ಶಿಕ್ಷಿಸುವುದಕ್ಕಾಗಿ ಈ ತಿದ್ದುಪಡಿ ಮಸೂದೆಯು ತರಲಾಗಿದೆ. ಭಾರತವು ೪೫ ಕೋಟಿಗಿಂತಲೂ ಹೆಚ್ಚಿನ ಹಣವನ್ನು ಸೈನ್ಯದ ಖರ್ಚಿಗೆ ಕೊಡುತ್ತಿರುವಾಗ ಅವರಿಗೆ ಆ ಸೈನ್ಯದ ಉಪಯೋಗದಲ್ಲಿ ಯಾವ ಅಧಿಕಾರವೂ ಇರಬಾರದೆಂದು ಹೇಳಿ, ಅವರ ವಾಕ್ ಸ್ವಾತಂತ್ರ್ಯವನ್ನು ಕೂಡಾ ಸೆಳೆದೊಯ್ಯಲು ಯತ್ನಿಸುವ ಈ ಮಸೂದೆಯು ಭಾರತೀಯರಿಗೆ ಸರ್ವಥಾ ರುಚಿಸುವಂತಿಲ್ಲವೆಂದು ಹೇಳಬೇಕಾಗಿಲ್ಲ. ಕೇಂದ್ರ ನ್ಯಾಯವಿಧಾಯಕ ಸಭೆಯಲ್ಲಿ ಪ್ರತಿಯೊಬ್ಬ ಭಾರತೀಯ ಸದಸ್ಯನೂ ಇದನ್ನು ವಿರೋಧಿಸದಿರಲಾರನೆಂದು ನಮ್ಮ ಭರವಸೆ. ಕೇಂದ್ರ ಸರಕಾರವು ಭಾರತೀಯರ ಅಭಿಪ್ರಾಯವನ್ನು ಕಡೆಗಣಿಸಿ, ಅವರ ಜನ್ಮಸಿದ್ಧ ಹಕ್ಕನ್ನು ನಿರಾಕರಿಸಿರುವುದನ್ನು ನೋಡುವಾಗ ಭಾವೀ ಫೆಡರೇಶನು ನಮಗೆಷ್ಟು ಪ್ರಯೋಜನಕಾರಿಯಾಗಬಹುದೆಂದು ವ್ಯಕ್ತವಾಗುತ್ತದೆ.

---

### ಪರದೇಶೀಯರಿಗೆ ಉದ್ಯೋಗ.

ಇಂಡಿಯಾ ಸರಕಾರವು ದಿನೇ ದಿನೇ ಪರದೇಶೀಯರಿಗೆ ಭಾರತದಲ್ಲಿ ಪ್ರಾಮುಖ್ಯ ಉದ್ಯೋಗಗಳನ್ನು ಕೊಡುತ್ತಿದೆ. ಭಾರತದಲ್ಲಿ ಎಷ್ಟೋ ಮಂದಿ ಐ. ಸಿ. ಯಸ್. ಕಲಿತವರಿದ್ದರೂ, ರಜೆಯ ಮೇಲೆ ಈಗಾಗಲೇ ಹೋಗಿರುವ ಹಲವು ಪ್ರಾಂತಿಕ ಗವರ್ನರರುಗಳ ಸ್ಥಾನಕ್ಕೆ ಬ್ರಿಟಿಷರನ್ನೇ ನೇಮಿಸಲಾಗಿದೆ. ಈ ಕುರಿತು ಭಾರತೀಯರು ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸಿದರೂ ಬ್ರಿಟಿಷ್ ಸಾಮ್ರಾಜ್ಯಶಾಹಿಯ ರಥವು ಎಂದಿನಂತೆಯೇ ಮುನ್ನಡೆಯುತ್ತಿದೆ. ಇತ್ತೀಚೆಗೆ ಇನ್ಶೂರೆನ್ಸ್ ಖಾತೆಯ ಸುಪರಿಂಟೆಂಡೆಂಟರ ಸ್ಥಾನಕ್ಕೆ ಭಾರತೀಯ ಅಧಿಕಾರಿಗಳಿದ್ದರೂ ವಿದೇಶಿಯರನ್ನು ನೇಮಿಸಿದ್ದಾರೆ. ಈ ಕುರಿತು ಶ್ರೀ ಸತ್ಯಮೂರ್ತಿಗಳು ನಿಲುವಳಿ ಸೂಚನೆಯನ್ನು ತಂದಿದ್ದರು. ಮುಸ್ಲಿಮ್ ಲೀಗಿನ ವಿಚಿತ್ರ "ತಟಸ್ಥತೆ"ಯ ದೆಸೆಯಿಂದ ಒಂದು ಮತವು ಕಡಿಮೆಯಾಗಿ ಅದು ಬಿದ್ದುಹೋಯಿತು. ಇಂಡಿಯಾ ಸರಕಾರವು ಬಡ ಭಾರತೀಯರು ತೆರುವ ತೆರಿಗೆಯ ಹಣವನ್ನು ನಿರುದ್ಯೋಗಿಗಳಾಗಿ ಅಂಡಲೆಯುತ್ತಿರುವ ಭಾರತೀಯರಿಗಾಗಿ ವಿನಿಯೋಗಿಸದೆ, ವಿದೇಶಗಳ 'ತಜ್ಞ'ರಿಗೆ ವೇತನದ ರೂಪದಲ್ಲಿ ಕೊಡುತ್ತಿರುವುದು ಭಾರತೀಯರ ದೌರ್ಭಾಗ್ಯವಾಗಿದೆ. ಈ ಚಿಕ್ಕಪುಟ್ಟ ಸುಧಾರಣೆಗಳನ್ನು ಜಾರಿಗೆ ತರಲು ಸಾಧ್ಯವಾಗದಿದ್ದರೆ ಈ ಸವಲತ್ತುಗಳನ್ನು ಕೂಡಾ ಬ್ರಿಟಿಷ್ ಸರಕಾರವು ಕೊಡದಿದ್ದರೆ ಸಂಯುಕ್ತ ರಾಜ್ಯ ಘಟನೆಯ ಸವಿಗನಸು ಅರ್ಥರಹಿತವಾದುದೆಂಬುದರಲ್ಲಿ ನಿಸ್ಸಂಶಯ.

---

### ಬಂಗಾಳ ಮಂತ್ರಿಮಂಡಲದ ಮೇಲೆ ಅವಿಶ್ವಾಸ ಠರಾವು.

ಬಂಗಾಳದ ಮಿ। ಫಜ್ಲುಲ್ ಹಕ್ಕರ ಮಂತ್ರಿಮಂಡಲವು ತನ್ನ ಚುನಾವಣಾ ಆಶ್ವಾಸನೆಗಳನ್ನು ಕಾರ್ಯರೂಪಕ್ಕೆ ತರಲಿಲ್ಲವೆಂದು ಕಾಂಗ್ರೆಸಿನ ಮುಂದಾಳುತನದಲ್ಲಿ ವಿರೋಧ ಪಕ್ಷವು ಬೇರೆ ಬೇರೆ ಅವಿಶ್ವಾಸ ಠರಾವುಗಳನ್ನು ಎಲ್ಲಾ ಮಂತ್ರಿಗಳ ಮೇಲೆ ತಂದಿತ್ತು. ೨೫೦ ಮಂದಿ ಸದಸ್ಯರನ್ನೊಳಗೊಂಡ ಬಂಗಾಳ ವಿಧಾಯಕ ಸಭೆಯಲ್ಲಿ ಕಾಂಗ್ರೆಸ್ ಪಕ್ಷದಲ್ಲಿ ಕೇವಲ ೫೩ ಮಂದಿ ಮಾತ್ರ ಇದ್ದರೂ, ೧೧೧ ಮಂದಿಯನ್ನು ಒಟ್ಟುಗೂಡಿಸುವಷ್ಟು ಸಾಹಸವನ್ನು ಮಾಡಿರುವುದು ಸಂತೋಷದ ಸಂಗತಿ. ಆದರೆ ಕಾಸಿಮ್ ಬಝಾರ್ ರಾಜರ ಮೇಲೆ ತಂದ

# ಬಂಗಾಳ ಮ...

## ಅವಿ...

ಅವಿಶ್ವಾಸ ಠರಾವು ಮಾ... ಮತಗಳಿಂದ ಬಿದ್ದುಹೋ... ಆ ಬಳಿಕ ಲೇಬರ್ ಮಂತ್ರಿ... ಮಿ। ಯಸ್. ಯಸ್. ಶು... ಯವರ ಮೇಲೆ ಅವಿಶ್ವಾಸ... ತರಲ್ಪಟ್ಟಿತು. ಇಷ್ಟ... ಮಂತ್ರಿಮಂಡಲದ ಪಕ್ಷ... ವಿರೋಧ ಪಕ್ಷದವರ ಮೇಲೆ... ಆರೋಪಣೆಯನ್ನು ಹೊರ...



ಬಂಗಾಳದ ಪ್ರಧಾನ ಮಂ...

**ಮಿ। ಫಜ್ಲುಲ್ ಹಕ್...**

ಮತಗಳನ್ನು ಹಣಕೊಟ್ಟು... ರೆಂದು ಹೇಳಿದಾಗ ಶಾ... ಯಲ್ಲಿ ಗಲಭೆಯುಂಟಾಗಿ... ಗಳು ಹೊರಗೆ ಹೋ... ಆರೋಪಣೆಯನ್ನು ವಾಕ್... ಮಿ। ಅಜೀಜುಲ್‌ಹಕ್‌ರವ... ರಿಸುತ್ತಿದ್ದಾರೆ.

**ವಿರೋಧ ಪಕ್ಷದ ಹೊಸ ಉಪಾಯ.**

ಕಾಸಿಮ್ ಬಝಾರಿನ ರಾಜರ ಮೇಲೆ ತಂದ

## ದ ಮೇಲೆ
## ್ರ

ದ್ದು ಹೋದುದರಿಂದ ದವರು ಹೊಸ ಉಪಾ ಾಡಲಾರಂಭಿಸಿದ್ದಾರೆ. ರಾವನ್ನು ಈಗಲೇ ಪಕ್ಷವು ಇನ್ನಷ್ಟು ನಕ ಕಾಯುವರೆಂದು ಫಜ್ಲುಲ್ ಹಕ್ಕ ಡಲದ ಪಕ್ಷವು ಯು ಪಕ್ಷದ ಮರೆ ಹೊ ತಗಳ ಗಣನೆಯಿಂದ ಗುತ್ತದೆ. (ವಿರೋಧ ಗಳು ೧೧೧; ಮಂತ್ರಿ ಕ್ಷದ ಮತಗಳು ೋಪಿಯನರು ಮಂತ್ರಿ ಕ್ಷಕ್ಕೆ ಬೆಂಬಲವಿತ್ತ ರಿಸ್ಥಿತಿಯು ತೀರಾ ಿತು.) ಅವಿಶ್ವಾಸ ಇನ್ನೂ ಬರಲಿರುವುದ ಳ ಪರಿಣಾಮವು ಹೇ ಹೇಳಲಾಗುವುದಿಲ್ಲ.

---

**ರಣಾ ಕಾನೂನಿ ವಾಗಿ ಲಾಭ**

ೂರಿನ ಸಬೋರ್ಡಿ ರಾದ ಶ್ರೀ. ಎಸ್. ಆಯ್ಯಂಗಾರರು ಲರಲ್ಲಿ ಆಸ್ತಿ ಆಡವಿನ ಗಾಗಿ ರೂ. ೨೭೬೯೦ ವ್ಯಾಜ್ಯದಲ್ಲಿ, ಸಾಲ ಾನೂನಿಗನುಸಾರವಾಗಿ ಕ್ಕೆ ಮಾತ್ರ ಡಿಕ್ರಿ ಪೂರ್ವ ತಂಜಾವೂರು ರ್ಡಿನಲ್ಲಿ ಕಾಂಗ್ರೆಸ್ ರುವ ಶ್ರೀ. ಟಿ. ಎಸ್. ಆಯ್ಯರರು ವಾದಿ ರುಮಲಾಯಿಯ

ವೆಂಕಟಾಚಲ ಮುದಲಿಯಾರರೆಂಬ ವರನ್ನು ಮೊದಲನೇ ಪ್ರತಿವಾದಿ ಮಾಡಿ ರೂ. ೨೭೬೯೦ಕ್ಕೆ ದಾವಾ ದಾಖಲು ಮಾಡಿದ್ದರು. ೧೯೩೧ನೇ ನವಂಬರದಲ್ಲಿ ಪ್ರತಿವಾದಿಯು ಆಸ್ತಿ ಜವಾಬ್ದಾರಿ ಕೊಟ್ಟು ವಾದಿಯಿಂದ ರೂ. ೧೭೦೦೦ವನ್ನು ಸಾಲ ಪಡೆದಿದ್ದು ವ್ಯವಹರಣೆಯಲ್ಲಿ ಬಡ್ಡಿ ಸೇರಿ ಆ ಮೊತ್ತವು ೨೭೬೯೦ಕ್ಕೆ ಏರಿತ್ತು.

ಪ್ರತಿವಾದಿಯರು ಸಾಲ ನಿವಾರಣಾ ಕಾನೂನಿಗನುಸಾರವಾಗಿ, ತಾನು ರೂ ೩೬೩೮ನ್ನು ಮಾತ್ರ ತೆರುಲು ಬಾಧ್ಯನೆಂಬ ಉದಾಹರಣೆ ಕೊಟ್ಟಿದ್ದರು. ದಸ್ತಾವೇಜನ್ನು ಪ್ರತಿವಾದಿಯ ತಂದೆಯು ವಾದಿಯ ತಂದೆಗೆ ೧೯೧೩ನೇ ಮೇ ೧ರಲ್ಲಿ ರೂ. ೧೨೦೦೦ಕ್ಕೆ ಬರಕೊಟ್ಟದ್ದಾಗಿದೆ. ಈ ೧೨೦೦೦ದ ಬಗ್ಗೆ ವಾದಿಯು ಕೆಲವಂಶಕ್ಕೆ ಪ್ರತಿವಾದಿಗೆ ಪ್ರೊಮಿಸರಿನೋಟು ಬರಕೊಟ್ಟಿದ್ದು, ನಗದಿಯಾಗಿ ಪ್ರತಿವಾದಿಗೆ ಸಂದ ರೂಪಾಯಿ ೧೧೭೧೮ ಮಾತ್ರ. ೧೯೧೩ನೇ ಇಸವಿಯಿಂದ ಈ ತನಕ ಬಡ್ಡಿಯಾಗಿ ಒಟ್ಟಿಗೆ ರೂ. ೧೯೭೯೮ ಸಂದಾಯವಾಗಿದ್ದು, ಆ ಬಗ್ಗೆ ದಸ್ತಾವೇಜಿನಲ್ಲಿ ಷರಾ ಬರೆದಿದೆ. ಸಾಲ ನಿವಾರಣಾ ಕಾನೂನಿನ ೮ನೇ ಸೆಕ್ಷನಿನಲ್ಲಿ ನಮೂದಿಸಿರುವಂತೆ ಅಸಲು ಹಣದ ಎರಡರಷ್ಟು ಸಂದಾಯವಾದಲ್ಲಿ, ಇಡೀ ಸಾಲವು ಸಂದಾಯವಾದಂತಾಗುವದು. ಆ ಪ್ರಕಾರ ತಾನು ರೂ. ೩೬೩೮ನ್ನು ಕೊಟ್ಟಲ್ಲಿ ಮೊದಲು ಕೊಟ್ಟ ೧೯೭೯೮ ಕೂಡಿ ಜುಮ್ಲಾ ರೂ. ೨೩೪೩೬ ಆಗುವದು. ಇದು ವಾದಿಯ ಅಸಲು ಹಣವಾದ ರೂ. ೧೧,೭೧೮ ಗಳ ಎರಡರಷ್ಟಾಗುವದು. ಆದ್ದರಿಂದ ರೂ. ೩೬೩೮ಕ್ಕೆ ಮಾತ್ರ ಡಿಕ್ರಿ ಕೊಡತಕ್ಕದ್ದೆಂದು ಪ್ರತಿವಾದಿಯ ಉದಾಹರಣೆ.

# ಸಾಲಗಾರನಿಗೆ ಮುನಾಫೆ!

## ರೂ. ೨೭,೬೯೦ಕ್ಕೆ ವ್ಯಾಜ್ಯ; ೩,೬೩೮ಕ್ಕೆ ಡಿಕ್ರಿ!

---

### ಸಾಲನಿವಾರಣಾ ಕಾನೂನಿನ ಪರಿಣಾಮ

ಎರಡನೇ ಸಲ ೧೯೩೧ರಲ್ಲಿ ನಡೆದ ದಸ್ತಾವೇಜು ಮೊದಲಿನವರ ಹೆಸರಿನಲ್ಲಿ ನಡೆದುದಲ್ಲವಾದ್ದರಿಂದ ಈಗಿನ ವಾದಿಯು ಬೇರೆಯೇ, ಆದ್ದರಿಂದ ಸೆಕ್ಷನ್ ೮ ಇದಕ್ಕೆ ಲಗಾವಾಗುವದಿಲ್ಲವೆಂದು ವಾದಿಯ ಕಡೆಯಿಂದ ಸಾಧನೆ ನಡೆಯಿತು.

ಇತ್ತಂಡದವರ ವಾದಗಳನ್ನೂ ಸರಿಯಾಗಿ ಪರಾಂಬರಿಸಿದ ಮೇಲೆ ಜಡ್ಜರು 'ಕಾನೂನಿನ ೮ನೇ ಸೆಕ್ಷನಿನನ್ವಯ 'ಸಾಲ ಕೊಟ್ಟವ' ನೆಂದರೆ ಪ್ರಥಮತಃ ಕೊಟ್ಟವನೆಂದೂ, ಆದ್ದರಿಂದ ವಾದಿಯ ತಂದೆಯನ್ನೇ ಸಾಲಗಾರನೆಂದು ಹಿಡಿದು, ಆದಿಯ ಅಸಲು ಐವೇಜನ್ನು ಸಾಲದ ಹಣವಾಗಿ ತೆಗೆದುಕೊಳ್ಳಬೇಕಾಗುವದೆಂದೂ ತೀರ್ಮಾನಿಸಿ, ಪ್ರತಿವಾದಿಯ ಹೇಳಿಕೆಯಂತೆ, ರೂ. ೩೬೩೮ ಮತ್ತು ಅದರ ಅಂಶದ ಖರ್ಚಿಗೆ ಮಾತ್ರ ಡಿಕ್ರಿ ಕೊಟ್ಟರು. ವಾದಿಯ ಕಡೆಯಿಂದ ಶ್ರೀ. ವಿ. ರಾಘವಾಚಾರ್, ಬಿ. ಎ. ಬಿ. ಎಲ್. ಇವರೂ, ಪ್ರತಿವಾದಿಯ ಪರವಾಗಿ ಶ್ರೀ. ವಿ. ಎಸ್. ರಾಮಸ್ವಾಮಿ ಅಯ್ಯಂಗಾರ್, ಬಿ. ಎ. ಬಿ. ಎಲ್. ರವರೂ ವ್ಯವಹರಿಸಿದ್ದರು.

---

**ಮುಂಬಯಿಯಲ್ಲಿ ಎರಡು ದಿನಗಳ ಪಾನನಿಷೇಧ.**

ಮಜೂರರಿಗೆ ವೇತನ ಸಿಗುವಂದು ಮತ್ತು ಅದರ ಮರುದಿನ ಮುಂಬಯಿಯ ಎಲ್ಲಾ ಮದ್ಯದಂಗಡಿಗಳು ಮುಚ್ಚಲ್ಪಡುವ ಒಂದು ನಿಯಮವನ್ನು ಮುಂಬಯಿ ಸರಕಾರದವರು ಮಾಡಿದ್ದಾರೆ. ಇದರಿಂದಾಗಿ ಇನ್ನೂರು ಸಾವಿರ ಜನರಿಗೆ ಮಹತ್ವದ ಉಪಕಾರವಾಗಿದೆ. ಕಳೆದ ಆಗೋಸ್ಟ ತಾ. ೯ ಮತ್ತು ೧೦ರಂದು ಎಲ್ಲಾ ಮದ್ಯದಂಗಡಿಗಳು ಮುಚ್ಚಲ್ಪಟ್ಟಿದ್ದುವು. ಔದ್ಯೋಗಿಕ ಕೇಂದ್ರಗಳಲ್ಲಿ ಈ ಧೋರಣೆಯನ್ನನುಸರಿಸುವುದರಿಂದ ಪಾನನಿರೋಧ ಮಸೂದೆಯನ್ನು ಮುಂದೆ ಪೂರ್ಣವಾಗಿ ಜಾರಿಗೆ ತರಲು ಬಹಳ ಸಹಾಯಕಾರಿಯಾಗುವುದೆಂದು ಸರಕಾರದ ಅಭಿಪ್ರಾಯವಾಗಿದೆ.

---

# ವಿದೇಶ ವಿಚಾರಗಳು

**ಜೆಕೊಸ್ಲೊವೇಕಿಯದಲ್ಲಿ**

ಬ್ರಿಟಿಷ್ ಪ್ರತಿನಿಧಿಗಳಾದ ಲಾರ್ಡ್ ರನ್ಸಿಮೆನ್‌ರವರು ಜೆಕೊಸ್ಲೊವೇಕಿಯಕ್ಕೆ ತೆರಳಿ ಅಲ್ಪಸಂಖ್ಯಾತ ಪ್ರಶ್ನೆಯನ್ನು ರಾಜಿಯಲ್ಲಿ ತೀರ್ಮಾನಿಸಲೆತ್ನಿಸುತ್ತಿದ್ದಾರೆ. ಲಾಭದಾಯಕವಾಗಿದ್ದರೆ ಜರ್ಮನರು ಇದಕ್ಕೆ ಸಮ್ಮತಿಸಬಹುದು.

∴

**ರಷ್ಯ-ಜಪಾನು ಯುದ್ಧ.**

ಸೊವಿಯೆಟ್ ರಷ್ಯ ಮತ್ತು ಜಪಾನುಗಳೊಳಗೆ ಮಕ್ಡೆನ್ ಪ್ರದೇಶದಲ್ಲಿ ಪ್ರಾರಂಭವಾದ ಯುದ್ಧವು ನಡೆಯುತ್ತಿದೆ. ಜಪಾನು ರಾಜೀ ಪ್ರಸ್ತಾಪವನ್ನು ಮುಂದೆ ತಂದರೂ ಅದು ಫಲಕಾರಿಯಾಗಲಿಲ್ಲ. ಇತ್ತಂಡದವರೂ ತಮ್ಮ ಜಯಘೋಷವನ್ನು ಮಾಡುತ್ತಿದ್ದರೂ ರಷ್ಯವು ವಿಜಯವನ್ನು ಹೊಂದಿದೆಯೆಂದು ಹೇಳಬಹುದಾಗಿದೆ.

∴

**ಚೀನಾಯುದ್ಧದಲ್ಲಿ**

ಜಪಾನಿಯರು ಹ್ಯಾಂಕೋ ನಗರದ ಬಳಿಯಲ್ಲಿ ಯಶಸ್ವಿಯಾಗಿ ಯುದ್ಧಮಾಡುವುದಿದ್ದರೂ ಯಾಂಗ್ಟ್ಸೆನದಿಯ ನೆರೆಯಿಂದಾಗಿ ಅವರ ಮುನ್ನಡೆಗೆ ತಡೆಯುಂಟಾಗಿದೆ. ಇದರಿಂದಾಗಿ ಚೀನೀ ಸೈನ್ಯವು ಸುಲಭವಾಗಿ ಜಪಾನಿಯರ ಮೇಲೆ ಬಾಂಬೆಸೆಯುತ್ತಿದೆ. ಯುದ್ಧವು ಇನ್ನಷ್ಟು ಭೀಕರವಾಗಿ ನಡೆಯುತ್ತಿದೆ. ಮಾರ್ಷಲ್ ಚಿಯಾಂಗ್ ಕೈಶೇಕರು ಕವಿ ರವೀಂದ್ರರಿಗೆ ಬರೆದ ಪತ್ರದಲ್ಲಿ ಚೀನವು ಖಂಡಿತವಾಗಿಯೂ ಯಶಸ್ವಿಯಾಗುವುದೆಂದು ಭರವಸೆ ಪಟ್ಟಿದ್ದಾರೆ.

∴



ಜೆಕೊಸ್ಲೊವೇಕಿಯದ ಸುಡೇಟನ್ ಜರ್ಮನ್ ಅಲ್ಪಸಂಖ್ಯಾತರ ಮುಂದಾಳುವಾದ
**ಹೆರ್ ಹೆನ್ಲಿನ್**

**ಯುದ್ಧಪೀಡಿತ ಸ್ಪೈನಿನಲ್ಲಿ-**

ಸರಕಾರೀ ಪಕ್ಷವು ಎಬ್ರೋ ಯುದ್ಧರಂಗದಲ್ಲಿ ಯಶಸ್ವಿಯಾಗಿ ಹೋರಾಡುತ್ತಿದೆ. ಸರಕಾರಕ್ಕೆ ಬರುವ ಆಹಾರಸಾಧನಗಳನ್ನು ವಿದ್ರೋಹಿಗಳು ತಪ್ಪಿಸಿರುವುದರಿಂದ ಪರಿಸ್ಥಿತಿಯು ಕಠಿನವಾಗಿದೆ. ಜನರಲ್ ಫ್ರೇಂಕನಿಗೆ ಇಟಲಿಯಿಂದ ವಿಮಾನಗಳೂ, ಜರ್ಮನಿಯಿಂದ ಸೈನ್ಯವೂ, ಯುದ್ಧೋಪಕರಣಗಳೂ ಕಳುಹಿಸಲ್ಪಡುತ್ತಿವೆ. ಫ್ರೇಂಕನು ಲೇಕ್ ಲುಗಾನೋ ಎಂಬ ಬ್ರಿಟಿಷ್ ಹಡಗದ ಮೇಲೆ ಬಾಂಬೆಸೆದರೂ ಬ್ರಿಟನಿನ ವಿಚಿತ್ರ ವಿದೇಶಾಂಗ ಧೋರಣೆಯು ಗೊರಕೆ ಹೊಡೆಯುತ್ತಿದೆ.

∴

**ಜರ್ಮನಿಯ ಯುದ್ಧಸಿದ್ಧತೆ**

ಜೆಕೊಸ್ಲೊವೇಕಿಯದ ಪರಿಸ್ಥಿತಿಯಿಂದ ತನಗೆ ಲಾಭವಿಲ್ಲವೆಂದು ಹಿಟ್ಲರನು ರ್ಹೈನ್ ಲೇಂಡಿನಲ್ಲಿ ಯುದ್ಧೋಪಕರಣಗಳನ್ನು ಕೂಡಿಹಾಕಿ ವಿದೇಶದ ಸೈನ್ಯಗಳು ಅಲ್ಲಿಗೆ ಹೋಗಬಾರದೆಂದು ಆಜ್ಞೆಯಿತ್ತಿದ್ದಾನೆ. ಸ್ಪೈನ್ ಸರಕಾರವು ಬ್ರಿಟಿಷರ ತಾಟಸ್ಥ್ಯ ಧೋರಣೆ ಗೊಪ್ಪಿದರೂ, ವಿದ್ರೋಹೀ ಪಕ್ಷವು ಇನ್ನೂ ಒಪ್ಪಿಗೆಯನ್ನು ಕೊಡದಂತೆ ಮಾಡಲು ಹಿಟ್ಲರ್ ಮುಸ್ಸೋಲಿನಿಯರೇ ಕಾರಣರೆಂದು ತಿಳಿಯಲಾಗಿದೆ. ಇಟಾಲಿಯನ್ ಸೈನ್ಯವು ಸ್ಪೈನಿನಿಂದ ಹೊರಬರುವ ಬದಲು ದಿನೇ ದಿನೇ ಇನ್ನಷ್ಟು ಸೈನ್ಯವು ಅಲ್ಲಿಗೆ ಹೋಗುತ್ತಿದೆ.

∴

**ಇಜಿಪ್ಟಿನ ಸೈನ್ಯ ಸುಧಾರಣೆ.**

ಇಜಿಪ್ಟಿನ ಪ್ರಧಾನ ಮಂತ್ರಿಗಳಾದ ಮಹಮೂದ್ ಮಹಮ್ಮದ್ ಪಾಶರು ಬ್ರಿಟಿಷ್ ವಿದೇಶಮಂತ್ರಿ ಹೆಲಿಫ್ಯಾಕ್ಸರೊಡನೆ ಇಜಿಪ್ಟ್ ಸಂರಕ್ಷಣೆಯ ಕುರಿತು ಲಂಡನಿನಲ್ಲಿ ಮಾತುಕತೆ ನಡೆಸಿದ ಫಲಿತಾಂಶವಾಗಿ, ಬ್ರಿಟಿಷ್ ಸರಕಾರವು ವಿಮಾನಪಡೆ, ನೌಕಾಪಡೆ ಇವೇ ಮೊದಲಾದುವುಗಳನ್ನು ಹೆಚ್ಚಿಸಿ ಇಜಿಪ್ಟಿನಲ್ಲಿ ಇನ್ನಷ್ಟು ಹಣವನ್ನು ಯುದ್ಧಸಿದ್ಧತೆಗಾಗಿ ವ್ಯಯಿಸಲಿದೆ.

ಬ್ರಿಟಿಷ್ ಸಾಮ್ರಾಜ್ಯವನ್ನೇ ಬಲಪಡಿಸುವುದು ಬ್ರಿಟಿಷರ ಈಗಿನ ಯತ್ನವಾಗಿದೆ.

∴

## ಮೆಕ್ಸಿಕೋವಿನ ವಾದ

ಮೆಕ್ಸಿಕೋವಿನ ಅಧ್ಯಕ್ಷ ಕಾರ್ಡೆನಾಸ್‌ರವರು ಎಣ್ಣೆ ಕಂಪೆನಿಗಳ ಆಸ್ತಿಯ ಬಾಬ್ತು ಬ್ರಿಟಿಷರಿಗೆ ಕೊಡಲಿರುವ ಹಣದ ಪ್ರಶ್ನೆಯನ್ನು ಅಮೇರಿಕವು ತೀರ್ಮಾನಿಸುವ ಅವಶ್ಯವಿಲ್ಲವೆಂದೂ, ಎರಡೂ ರಾಷ್ಟ್ರಗಳ ಪ್ರತಿನಿಧಿಗಳು ಸೇರಿ ಅಲ್ಲಿಯ ಆಸ್ತಿಗಳ ಹಣವು ರಾಷ್ಟ್ರೀಯರಿಗೂ, ವಿದೇಶಿಯರಿಗೂ ಸಮಾನವಾಗಿ ಸಲ್ಲುವಂತೆ ಮಾಡಬೇಕೆಂದಿದ್ದಾರೆ. ಈ ಸೂಚನೆಯು ಅಮೇರಿಕಕ್ಕೂ ಬ್ರಿಟನಿಗೂ ರುಚಿಸಲಿಲ್ಲ.

∴

## ಬ್ರಿಟಿಷ್ ಕೀರ್ತಿಗೆ ತಿಲಾಂಜಲಿ!

'ಪ್ರಜಾಸತ್ತಾತ್ಮಕ' ಬ್ರಿಟನ್-ಚೀನದ ಹೊಟ್ಟೆಯನ್ನು ಜಪಾನ್ ತಿವಿಯುತ್ತಿರುವಾಗ, ಸ್ಪೈನಿನ ಕೊರಳನ್ನು ಇಟಲಿ-ಜರ್ಮನಿಗಳು ಮುರಿಯುತ್ತಿರುವಾಗ, ಜೆಕೊಸ್ಲೊವೇಕಿಯವನ್ನು ಹಿಟ್ಲರನು ಮೆಲ್ಲನೆ ನುಂಗುತ್ತಿರುವಾಗ 'ಶಾಂತಿ, ಶಾಂತಿ' ಯೆಂದು ಹೇಳುತ್ತಾ ತನ್ನ ಯುದ್ಧೋಪಕರಣಗಳನ್ನು ಹೆಚ್ಚಿಸುತ್ತಿದೆ. ಮೊನ್ನೆ ಮೊನ್ನೆ ಪ್ರಧಾನರಾದ ಚೇಂಬರ್ಲೇನರು ಭಾರತದ ಗಡಿನಾಡಿನ ಬಾಂಬೆಸೆತವು 'ಸರಿ' ಯೆಂದು ವಾದಿಸಿದರು. ಫೆಡರೇಶನನ್ನು ಭಾರತದ ಮೇಲೆ ಹೇಗಾದರೂ ಹೊರಿಸುವ ಸಿದ್ಧತೆಗಳಾಗುತ್ತಿವೆ. ಲಾರ್ಡ್ ಲೋಥಿಯಾನರು ಮುಂದಿನ ವೈಸರಾಯರಾಗಿ ಭಾರತಕ್ಕೆ ಕಳುಹಿಸಲ್ಪಡುವ ಸಂಭವವಿದೆ. ಯುದ್ಧ ಕಚೇರಿಯು 'ಭಾರತ ಸಂರಕ್ಷಣೆ'ಗಾಗಿ ೪೫ ಕೋಟಿ ರೂಪಾಯಿ ಸಾಲದೆ ಇನ್ನಷ್ಟು ಖರ್ಚು ಮಾಡುವುದರಲ್ಲಿದೆ. ಒಟ್ಟಿನಮೇಲನ್ನುವುದಿದ್ದರೆ 'ಪ್ರಜಾಪ್ರಭುತ್ವ'ದ ಪದ್ಧತಿಗಳು ಹದಿನೆಂಟನೆಯ ಶತಮಾನದ ಸೋಗನ್ನೂ ಧರಿಸಲಾರಂಭಿಸಿವೆ



ಚತುರ ರಾಜನೀತಿಜ್ಞರೂ, ಜೆಕೊಸ್ಲೊವೇಕಿಯದ ಪ್ರಧಾನ ಮಂತ್ರಿಗಳೂ ಆದ
**ಡಾ. ಹಾಡ್ಜಾರವರು.**

∴

## ಪೆಲೆಸ್ತೈನಿನಲ್ಲಿ

ಬ್ರಿಟಿಷ್ 'ಚಾಣಾಕ್ಷತೆ'ಯ ರಥವು ನಡೆಯುತ್ತಲೇ ಇದೆ. ಮಿ. ಮೆಲ್ಕಾಲ್ಮ್ ಮೆಕ್ಡೊನಾಲ್ಡರು 'ಅನಿರೀಕ್ಷಿತ'ವಾಗಿ ಜೆರುಸಲೇಮಿಗೆ, ಹೋಗಿ ಬ್ರಿಟಿಷರು ಪೆಲೆಸ್ತೈನಿನ ನಿವಾಸಿಕರ ಹಿತಸಂಬಂಧವನ್ನು ರಕ್ಷಿಸುವುದೆಂದಿದ್ದಾರೆ. ಬ್ರಿಟನು ಅರಬರ ಸ್ವಾತಂತ್ರ್ಯವನ್ನು ನಾಶಗೊಳಿಸಿ, ಅನಾಗರಿಕ ಪದ್ಧತಿಗಳಿಂದ ತನ್ನ ಅಧಿಕಾರವನ್ನು ಅಲ್ಲಿ ನಡೆಸುತ್ತಿದೆ. ಅರಬರೂ, ಯೆಹೂದಿಯರೂ ದಿನೇ ದಿನೇ ಮೃತ್ಯುವಶರಾಗುತ್ತಿದ್ದಾರೆ. ಬ್ರಿಟಿಷ್ ಚಾಣಾಕ್ಷತೆಯ ಬೊಕ್ಕಸವು ಪೆಲೆಸ್ತೈನಿನ ವಿಚಾರದಲ್ಲಿ ಪೂರ್ಣ ಬರಿದಾಗಿದೆಯೆನ್ನುವಂತಾಗಿತೆ.

∴

## ಅಮೇರಿಕದ ಐಶ್ವರ್ಯ!

ಅಮೇರಿಕವು ಪೌರ್ವ-ಪಾಶ್ಚಾತ್ಯ ರಾಷ್ಟ್ರಗಳ ಬಿರುಗಾಳಿಯಲ್ಲಿ ಸಿಲುಕದೆ ಎಲ್ಲರಿಗೂ ಎಣ್ಣೆ ಮತ್ತು ಯುದ್ಧೋಪಕರಣಗಳನ್ನು ಮಾರಿ ತನ್ನ ಸಂಪತ್ತನ್ನು ಹೆಚ್ಚಿಸುತ್ತಿದೆ. ಈ ಕಾಲದಲ್ಲಿ ಪ್ರಜಾಸತ್ತೆಯೆಂಬುದು ಕೇವಲ ಹಾಸ್ಯಾಸ್ಪದ ತತ್ವವಾಗಿದೆಯೆಂಬುದಕ್ಕೆ ಅಮೇರಿಕವು ಮಹತ್ವದ ನಿದರ್ಶನವಾಗಿದೆ. ಸ್ವತಃ ಪ್ರಬಲ ರಾಷ್ಟ್ರಗಳಲ್ಲೊಂದಾಗಿರುವುದರಿಂದ ಇದರ ಗೊಡವೆಗೆ ಇತರ ರಾಷ್ಟ್ರಗಳು ಹೋಗುವುದಿಲ್ಲ.

∴

## ಪಂಡಿತ ನೆಹರುಗಳ ವಿದೇಶ ಸಂಚಾರ

ಪಂಡಿತ ನೆಹರುಗಳು ಜರ್ಮನಿಯಲ್ಲಿ ಸಂಚರಿಸಿ ಆಗೋಸ್ಟು ತಾ. ೧೭ರಂದು ಲಂಡನಿಗೆ ತೆರಳುವರು. ತನ್ಮಧ್ಯೆ ಅವರು ಜೆಕೊಸ್ಲೊವೇಕಿಯಕ್ಕೆ ಹೋಗಿ ಅಧ್ಯಕ್ಷ ಬೆನೆಷ್ ಮತ್ತು ಡಾ. ಹಾಝ್ಝಾರವರನ್ನು ಕಂಡು ಸುಡೇಟನ್ ಅಲ್ಪ ಸಂಖ್ಯಾತ ಸಮಸ್ಯೆಯ ನಿಜಸ್ಥಿತಿಯನ್ನು ತಿಳಿಯುವರು. ಸೆಪ್ಟೆಂಬರ ತಿಂಗಳಲ್ಲಿ ನೆಹರುಗಳು ದಕ್ಷಿಣ ಯುರೋಪಿನಲ್ಲಿ ಸಂಚರಿಸಿ ಟರ್ಕಿ ಮೊದಲಾದ ದೇಶಗಳಿಗೆ ಹೋಗುವರು.

∴

## ರುಮೇನಿಯದಲ್ಲಿ ಸುಧಾರಣೆ.

ಜೆಕೊಸ್ಲೊವೇಕಿಯದ ಪಾಡನ್ನು ಕಂಡು ಯುರೋಪಿನ ಚಿಕ್ಕ ಪುಟ್ಟ ರಾಷ್ಟ್ರಗಳು ತಮ್ಮ ರಾಜ್ಯದ ಎಲ್ಲಾ ಅಲ್ಪಸಂಖ್ಯಾತರಿಗೆ ಸಮಾನ ಹಕ್ಕುಗಳನ್ನು ಕೊಡಲಾರಂಭಿಸಿವೆ. ರುಮೇನಿಯವು ಇದಕ್ಕೊಂದು ನಿದರ್ಶನವಾಗಿದೆ. ಅಲ್ಪಸಂಖ್ಯಾತರು ತಮ್ಮ ಸ್ವಂತ ಭಾಷೆಯನ್ನು ಉಪಯೋಗಿಸಬಹುದಲ್ಲದೆ ಅವರಿಗೆ ಜಾತೀಯ ಪ್ರಾತಿನಿಧ್ಯವು ಕೂಡಾ ಕೊಡಲ್ಪಟ್ಟಿದೆ. ಹೀಗೆಮಾಡಿರುವುದರಿಂದ ಆಯಾ ರಾಷ್ಟ್ರಗಳಲ್ಲಿರಬಹುದಾದ ಜರ್ಮನ್ ಅಥವಾ ಇಟಾಲಿಯನರ ಪರವಾಗಿ ಯುರೋಪಿನ ಸರ್ವಾಧಿಕಾರಿಗಳು ವಾದಿಸಲು ಎಡೆಯನ್ನು ಕೊಡದಂತಾಗುತ್ತದೆ.

∴



ಜೆಕೊಸ್ಲೊವೇಕಿಯದ
ಅಧ್ಯಕ್ಷರಾದ
**ಡಾ. ಬೆನೆಷ್‌ರವರು.**

## ಇರಾನಿನೊಡನೆ ಭಾರತದ ಸಂಬಂಧ.

ಮುಂದಿನ ವರ್ಷಾಂತ್ಯದೊಳಗೆ ಭಾರತಕ್ಕೂ ಇರಾನಿಗೂ ರೈಲ್ವೇ ಸಂಬಂಧವಾಗುವುದು. ಈಗಾಗಲೆ ಟ್ರಾನ್ಸ್ ಇರಾನಿಯನ್ ರೈಲ್ವೆಯ ಮೂಲಹಾದಿಯ ರಚನೆಯು ಪೂರ್ಣವಾಗಿದೆ. ಇದನ್ನು ಅಲ್ಲಿಯ ರಾಜರಾದ ರೀಝಾಶಹ ಪಹ್ಲೆವಿಯವರು ತೆರೆಯುವರು. ಇದರ ಮೂರು ಶಾಖೆಗಳು ಬಲೂಚಿಸ್ಥಾನ ಅಫಘಾನಿಸ್ಥಾನ ಮತ್ತು ಟರ್ಕಿ ದೇಶಗಳಿಗೆ ಸೇರುತ್ತವೆ. ಇದರಿಂದಾಗಿ ಭಾರತ, ಇರಾನ್ ದೇಶಗಳ ವ್ಯಾಪಾರ ಸಂಬಂಧವು ಸುಧಾರಿಸಬಹುದೆಂದು ನಿರೀಕ್ಷಿಸಲಾಗಿದೆ.

∴

## ಆಫ್ರಿಕದಲ್ಲಿ ಭಾರತೀಯರ ಪಾಡು

ದಕ್ಷಿಣ ಆಫ್ರಿಕದಲ್ಲಿರುವ ಭಾರತೀಯರಿಗೆ ಬಿಳಿ ಜನಾಂಗದವರು ಪ್ರಜಾಸತ್ತೆಯ ಸಾಮಾನ್ಯ ಹಕ್ಕುಗಳನ್ನು ಕೊಡದಿರುವ ಕುರಿತು ಅಲ್ಲಿಯ ಅನೇಕ ಭಾರತೀಯ ಧುರೀಣರು ತಮ್ಮ ನಿಷೇಧವನ್ನು ವ್ಯಕ್ತಪಡಿಸಿದ್ದಾರೆ. ಲವಂಗ ಬಹಿಷ್ಕಾರ ಒಪ್ಪಂದವು ಆಗೋಸ್ಟು ೧ರಂದು ಜಾರಿಗೆ ಬಂದಿರುವುದರಿಂದ ಅದರ ಶರ್ತಗಳಿಗನುಸಾರವಾಗಿ ಸಂಬಂಧ ಪಟ್ಟವರು ನಡೆಯುತ್ತಾರೋ ಎಂಬುದನ್ನು ಕಾಂಗ್ರೆಸ್ ನೋಡಿಕೊಂಡು ಭಾರತೀಯರ ಹಿತ ಸಂಬಂಧಗಳನ್ನು ರಕ್ಷಿಸುತ್ತಿರಬೇಕೆಂದು ಮಿ| ಬಿಹಾರಿಲಾಲ್ ಯನ್ ಅನಂತಾನಿಯವರು ಮೊನ್ನೆ ಮುಂಬಯಿಯಲ್ಲಿ ನಿವೇದಿಸಿಕೊಂಡಿದ್ದಾರೆ. ಬ್ರಿಟಿಷ್ ಸರಕಾರವು ಆಫ್ರಿಕದಲ್ಲಿರುವ ಭಾರತೀಯರ ಹಿತಸಂಬಂಧಗಳನ್ನು ರಕ್ಷಿಸದೆ ಅವರ ನಾಗರಿಕ ಹಕ್ಕುಗಳನ್ನು ಕೂಡಾ ಸೆಳೆದೊಯಿದಿದೆ. ಕೆನ್ಯಯದಲ್ಲಿರುವ ಭಾರತೀಯರ ಪಾಡು ಅತ್ಯಂತ ಶೋಚನೀಯವಾಗಿದೆ. ಮತದಾನ ಹಕ್ಕನ್ನು ಅವರಿಗೆ ಕೊಡದಿದ್ದರೆ ಇನ್ನಾವ ಹಕ್ಕನ್ನು ಅಲ್ಲಿಯ ಸರಕಾರವು ಕೊಡಬಹುದು? ಭಾರತೀಯರು ಈ ಬಗ್ಗೆ ಚಳವಳವನ್ನು ದಕ್ಷಿಣಾಫ್ರಿಕದಲ್ಲಿ ನಡೆಸುತ್ತಿದ್ದಾರೆ.

# ಅಪಾರ್ಥ ಶಬ್ದಾವಳಿ.

ಸಂಗ್ರಾಹಕರು: "ಸ್ವಾರ್ಥಿ"

**ಸ್ವಾರ್ಥ:** ಈ ವರೆಗೆ ಪ್ರಚಾರ ದಲ್ಲಿಲ್ಲದಿರುವ ಸ್ವಂತವಾದೊಂದು ಅರ್ಥ.

ಅತಃ ಸ್ವಾರ್ಥಿ: ತನ್ನದೇ ಆದ ಅರ್ಥವನ್ನು ಮಾಡುವವನು. ಉದಾ: ಶಂಕರಾಚಾರ್ಯರು ಮತ್ತು ಮಧ್ವಾಚಾರ್ಯರು. ಇವರು ಬ್ರಹ್ಮ ಸೂತ್ರಕ್ಕೆ ತಮ್ಮದೇ ಅರ್ಥವನ್ನು ಮಾಡಿದರು.

. . . . . . . . . . .

**ವಿಶ್ವಾಸ:** (ಸಂ) ವಿ+ಶ್ವಾಸ. ಯಾವುದರಿಂದ ಶ್ವಾಸವು ಹೋಗಿ ದೆಯೋ ಆದು—ಅಂದರೆ ಹೆಣ.

ವಿಮಾನ: ಮರ್ಯಾದೆ ಕೆಟ್ಟವ. ವಿ+ಮಾನ. ವಿಗತ ಎಂಬಂತೆ.

. . . . . . . . . .

**ಕರ್ನಾಟಕ:** (ತ್ಭ) ಕಣ್ಣು ಕಟ್ಟು (ಕಣ್ಣು ಕಟ್ಟು ಎಂಬ ಶಬ್ದ ವನ್ನು ಸಂಸ್ಕೃತಕ್ಕೆ ಮಾರ್ಪಡಿಸಿ ಅದು 'ಕರ್ನಾಟಕ' ವೆಂದಾಯ್ತು. ಉದಾ: ಮ್ಯಾಕ್ಸ್ ಮುಲ್ಲರ್ (ಜರ್ಮನ್) ಮೋಕ್ಷ ಮೂಲ.

. . . . . . . . . . .

**ಗಂಡಾಂತರ:** ೧. ಹೊಸ ಗಂಡ. (ಮತಾಂತರದ ಹಾಗೆಯೆ) ಇದು ಅರಿಸಮಾಸವಾಗಿದ್ದರೂ ಹೆಚ್ಚು ಪ್ರಚಾರದಲ್ಲಿರುವುದರಿಂದ ಪ್ರಯೋಗಾರ್ಹವೇ. ಉದಾ: ಕೂರಸಿ.

೨. ಮಧ್ಯಕಾಲದ ಗಂಡ. ಉದಾ: ಅಂತರ್‌ರಾಷ್ಟ್ರೀಯ.

೩. ಗುಟ್ಟಿನ ಗಂಡ. ವಿವರಣೆ: ಅಂತರ್:ಒಳಗಿನ ಅಂದರೆ ಗುಟ್ಟಿನ ಗಂಡ.

. . . . . . . . . . .

**ಹೃದಯ:** (ತ್ಸ) ಹೃತ್+ ಅಯಸ್. ಎಂದರೆ ಎದೆಯೆಂಬ ಕಬ್ಬಿಣ.

---

## ಅನಾವಶ್ಯಕದ ವಹಿವಾಟು



ಸುಬ್ಬ—(ಬಾಯಿ ಉಗ್ಗು) ಇ-ಇ-ಇ-ಇ-ಇ- ಈ. ಹಾದಿಯಿಂದ ಹು-ಹು-ಹು-ಹ್ಹೊ—ಹೋದರೆ ಕ್-ಖಡವಿಗೆ ಹೋಗುತ್ತದಲ್ಲಾ?

ರಾಮು—(ಇವನಿಗೂ ಅದೇ ರೋಗ ತನ್ನನ್ನು ಚಾಳಿಸಿದನೆಂಬ ಸಿಟ್ಟಿನಿಂದ) ನಿ-ನಿ-ನಿ-ನಿ-ನಿ- ನಿನ್ನಪ್ಪನ, ಮ-ಮನೆಯೋ ಅಲ್ಲಿ?

ಸುಬ್ಬ—(ಅದೇ ಸಿಟ್ಟು ಬಂದು) ಬೊ-ಬೊ-ಬ್ಬೋವ ಗನೆ ಏನಂದಿ?

ರಾಮು-ರ-ರ-ರ-ರಂ- -ಮಗನೆ-ನಿ-ನಿ-ನಿ-ನೀನೇ ನಂದಿ.

---

## ವಿನೋದಗಳು.

**ಮಾಸ್ತರ್:**—ಒಂದು ವರುಷಕ್ಕೆ ವಾರಗಳೆಷ್ಟು ಹುಡುಗಾ?

**ಹುಡುಗ:**—ಏಳು ಸಾರ್!

**ಮಾಸ್ತರ್:**—ಏಳು! ಯೋಚನೆ ಮಾಡಿ ಹೇಳು.

**ಹುಡುಗ:**—ಯೋಚಿಸಿಯೇ ಹೇಳಿದ್ದು ಸಾರ್. ಆದಿತ್ಯವಾರ, ಸೋಮವಾರ, ಮಂಗಳವಾರ, ಬುಧವಾರ, ಗುರುವಾರ, ಶುಕ್ರವಾರ, ಶನಿವಾರ. ನಾನು ಎಂಟನೇ ವಾರದ ಹೆಸರು ಕೇಳಲಿಲ್ಲ ಸಾರ್!

ooo ooo ooo

ಮಗು:—ಅಪ್ಪಾ, ನಿನ್ನೊಡನೊಂದು ಪ್ರಶ್ನೆ ಕೇಳಬೇಕೆಂದಿದ್ದೇನೆ.

ಅಪ್ಪ:—ಏನು ಮಗೂ?

ಮಗು:—ನಾನು ದೊಡ್ಡವನಾದಾಗ ನನ್ನ ಕಾಲಿನ ಮೊಣಕಂಡದ ಸ್ನಾಯುಗಳು ಕೆರೆಗೆ ಹೋಗುವುವೆ?

# ಹೇ ಪರಮೇಶ್ವರಾ!  ಜಾಗ್ರತೆಯಿಂದಿರು ದೇವಾ!





✿ ನಗೆಬರಹ. ✿

ಹೇ ದೇವ ದೇವ! ಕೈಲಾಸಾಧಿಪತಿ! ರಜತಗಿರಿವಾಸ! ನಿನಗೆ ಅನಂತಾನಂತ ಪ್ರಣಾಮಗಳು. ಎವರೆಸ್ಟ್ ನಿವಾಸಿ! ಹಿಮಾಲಯ ಗೃಹವಾಸಿ! ಇಗೋ, ಮೂರನೇ ಬಾರಿ ಬಂದೊದಗಿದ ಕುತ್ತದಿಂದ ಪಾರಾದುದಕ್ಕಾಗಿ ನಿನಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳು. ನೀನು ಅಗೋಚರ, ಅಚಿಂತ್ಯನೆಂಬುದು ಇನ್ನೊಮ್ಮೆ ರುಜುವಾಗಿ ಹೋಯಿತಲ್ಲಾ—ಕೈಲಾಸಾಧಿಪತೇ ಶಹಭಾಸ್!

ಆದರೆ ದೇವ ದೇವ! ನೀನೇನು ಮಾಡುತ್ತಿರುವಿ? ಒಂದಲ್ಲ, ಎರಡಲ್ಲ, ಮೂರು ಮೂರು ಬಾರಿ ಪಶ್ಚಿಮ ದೇಶದ ಜನರು ನಿನ್ನ ವಾಸಸ್ಥಾನದ ಸಮೀಪದ ವರೆಗೂ ಹತ್ತಿ ಬರುವಾಗ ನೀನೇಕೆ ಕಣ್ಣುಕೂರುತ್ತಿದ್ದಿ ದೇವ? ‘ಎವರೆಸ್ಟನ್ನು ಹತ್ತಿಯೇ ಬಿಡುತ್ತೇವೆ’ ಎಂದು ಕಾಲಿಟ್ಟೊಡನೆ, ನೀನು ಉರಿಗಣ್ಣನ್ನು ತೆರೆದು, ಅವರ ಬಿಳಿ ಮೋರೆಯ ಮೇಲೆ ಕಿಡಿಕಾರಿ, ಅದನ್ನು ಸುಟ್ಟು ಕಪ್ಪುಮಾಡಿ ನಿನ್ನ ಭಕ್ತರಾದ ನಮ್ಮ ಸಾಲಿಗೆ ಸೇರಿಸಿ ಬಿಡುವಿಯೆಂದು ನೆನಸಿದ್ದೆ. ತ್ರಿಶೂಲವನ್ನು ಬೀಸಿ, ಅವರ ರುಂಡಗಳನ್ನು ಹಾರಿಸಿ, ನಿನ್ನ ರುಂಡಮಾಲೆಯಲ್ಲಿ ಅವನ್ನು ಪೋಣಿಸಿಕೊಳ್ಳುವಿಯೆಂದು ನಿರೀಕ್ಷಿಸಿದ್ದೆ. ಆದರೆ ನಿನ್ನ ಸುದ್ದಿಯೇ ಇಲ್ಲವಲ್ಲ! ಮೂರು ಬಾರಿ ಹಿಮಾಲಯದ ೨೫,೦೦೦ ಅಡಿಯ ವರಗೆ ಹತ್ತಿದರೂ, ಅವರಿಗೆ ಮತ್ತೂ ಮತ್ತೂ ಛಳಿ ಹೆಚ್ಚಾಗಿ ಹತ್ತಲಾಗದೆ ಹಿಂದೆ ಬಂದುದು ಹೊರತು, ನಿನ್ನ ಉರಿಗಣ್ಣೋಟದ ಬಿಸಿಯೇ ತಾಗಲಿಲ್ಲವಲ್ಲ! ಹೇ ದೇವ, ಗೊತ್ತಾಯಿತು; ನಿನ್ನ ಅಪಾರ ಮಹಿಮೆ ತಿಳಿದು ಹೋಯಿತು. ಬುದ್ಧಿವಂತನಿದ್ದೀಯಾ ಪರಮೇಶ್ವರ! ನೀನು ಹಣೆಗಣ್ಣನ್ನು ಬಿಡುತ್ತಿದ್ದರೆ, ಅವರ ಛಳಿಗೆ ಅಗ್ಗಿಷ್ಟಿಕೆ ಹಾಕಿದಂತಾಗಿ ಕೂಡಲೇ ಶಿಖರಕ್ಕೆ ಹತ್ತಿ ಆ ಟಲ್‌ಮೇನ್ ಮೊದಲಾದವರು ‘ಥೇಂಕ್ ಯು ಮಿಸ್ಟರ್ ಈಶ್ವರನ್!’ ಎನ್ನದೆ ಬಿಡುತ್ತಿದ್ದಿಲ್ಲ. ಶೂಲವನ್ನು ಬಿಸುಡುತ್ತಿದ್ದರೆ, ಆ ಪರ್ವತದಲ್ಲಿ ಮತ್ತೇನಿಲ್ಲದಿದ್ದರೂ ‘ಫೋರ್ಕ್’ (ಯುರೋಪಿಯಾನರು ಮಾಂಸ ಚುಚ್ಚಿ ತಿನ್ನುವ ಮುಳ್ಳು) ದೊರೆಯಿತಲ್ಲಾ ಎಂದು ಹಿಗ್ಗಿ, ತನ್ನಲ್ಲಿಗೆ ಬಂದ ಅತಿಥಿಗಳನ್ನು ಈ ರೀತಿ ಸನ್ಮಾನಿಸಿದ ನಿನ್ನ ಜಂಟಲ್‌ಮೇನ್ ತನಕ್ಕಾಗಿ, ಆಗಲೂ ‘ಥೇಂಕ್ಸ್’ ಕೊಡುತ್ತಿದ್ದರು. ಅದನ್ನು ತಿಳಿದೇ ನೀನು ಅಡಗಿ ಕುಳಿತೆ ಎಂದು ಕಾಣುತ್ತದೆ. ಶಹಭಾಸ್! ಹೇಗಾದರೂ ಇಷ್ಟರವರೆಗೆ ನಿನ್ನ ರಜತಗಿರಿಗೆ ಹತ್ತಲಿಕ್ಕಾಗಲಿಲ್ಲವಲ್ಲ; ಬಚಾವು! ಆದರೆ ಆ ಬಿಳಿ ಮೋರೆಯವರು ಸುಮ್ಮನೆ ಕುಳಿತ. ಕೊಳ್ಳುವವರಲ್ಲ. ಸ್ವಲ್ಪ ಜಾಗ್ರತೆಯಿಂದಿರು ದೇವಾ! ನಿನಗೆ ಈ ಲೋಕದ ಜನರ ಬುದ್ಧಿವಂತಿಕೆಗಳು ಸರಿಯಾಗಿ ಗೊತ್ತಿಲ್ಲ. ಆ ಬಿಳಿ ವರ್ಣದವರು ನಿನ್ನ ಬೆನ್ನ ಹಿಂದೆ ಬರುವ ವರೆಗೂ ನಿನಗೆ ಗೊತ್ತಾಗಲಿಕ್ಕಿಲ್ಲ ಅವರ ಬೂಟ್ಸಿನ ‘ಸಡಕ್ ಸಡಕ್’ ಕೇಳಿದರೂ, ಮೇಯಲಿಕ್ಕೆ ಹೋದ ನಿನ್ನ ವಾಹನವಾದ ನಂದಿ ಬಂದನೇನೋ ಎಂದು ನೆನಸಿ ಪಾರ್ವತಿಯೊಡನೆ ಸಲ್ಲಾಪಮಾಡುತ್ತಾ ಬಿದ್ದುಕೊಳ್ಳಬೇಡ ದೇವ!

ಪರಮೇಶ್ವರ! ನಿನ್ನ ಕೈಲಾಸ ಪರ್ವತವನ್ನು ೨೫,೦೦೦ ಅಡಿಗಳ ವರೆಗೆ ಹತ್ತಿದ್ದರು–ಬಾಕಿಯುಳಿದುದು ನಾಲ್ಕು ಸಾವಿರ ಅಡಿಗಳು ಮಾತ್ರ. ದೇವಾ! ನಿನಗೆ ಮುಂಗೋಪ ಜಾಸ್ತಿ. ಇಲ್ಲವಾದರೆ ನಿನ್ನ ಕೈಲಾಸಗಿರಿ ಇನ್ನಷ್ಟು ಎತ್ತರಕ್ಕೇರುತ್ತಿತ್ತು. ತ್ರೇತಾಯುಗದ ಕತೆ ನೆನಪುಂಟೆ? ಆ ರಾವಣೇಶ್ವರ ಬಂದು ತನ್ನ ಇಪ್ಪತ್ತೂ ತೋಳುಗಳಿಂದ ನಿನ್ನ ಕೈಲಾಸವನ್ನು ಭಾರೀ ಮೇಲಕ್ಕೆತ್ತಿದೊಡನೆ ಸಿಟ್ಟುಗೊಂಡು ಒದ್ದು, ಅವನ ಕೈಗಳನ್ನು ಗಜಕ್ ಮಾಡಿಬಿಟ್ಟೆ. ಇಲ್ಲವಾದರೆ ನಿನ್ನ ಪರ್ವತ ಮತ್ತೂ ಎತ್ತರಕ್ಕೆ ಹೋಗುತ್ತಿತ್ತು. ಆದುದಾಯಿತಲ್ಲಾ ಹ್ಯಾಗೂ! ಇನ್ನಾದರೂ ಬುದ್ಧಿ ಬರಲಿ—ಇನ್ನೊಮ್ಮೆ ಬಿಳಿಯವರು ಬಂದು ದಮ್ಮು ಕಟ್ಟಿದರೆ ಶಿಖರಕ್ಕೂ ಹತ್ತಿಯೇ ಬಿಟ್ಟಾರು. ಓ ನಮ್ಮ ದೇವ ದೇವನೇ! ಅವರ ಕೈಗೆ ಸಿಕ್ಕುಬೇಡ. ಸಿಕ್ಕುಬಿಟ್ಟರೆ, ರಾಜಗೋಪಾ

ಲಾಚಾರ್ಯರು ನೈಲ್ ಪ್ರತಿಮೆಯನ್ನು ಪ್ರದರ್ಶನಾಲಯಕ್ಕೆ ದೂಡಿದ ಮುಯ್ಯನ್ನು ತೀರಿಸುವದಕ್ಕಾಗಿ, ನಿನ್ನನ್ನು ಕೊಂಡು ಹೋಗಿ ಲಂಡನಿನ ಪ್ರದರ್ಶನಾಲಯದಲ್ಲಿಡದೆ ಬಿಡಲಾರರು!

ಹೇ ದೇವ, ನಿನ್ನ ಭಕ್ತರಾದ ನಮ್ಮನ್ನು ನೀನೇ ಕಾಪಾಡಬೇಕು. ನಿನ್ನ ಮತ್ತು ನಮ್ಮ ಮರ್ಯಾದೆಯನ್ನು ನೀನೊಬ್ಬನೇ ಉಳಿಸಿಕೊಳ್ಳಬೇಕು. ನೋಡು ಈಶ್ವರ! ಬ್ರಿಟಿಷರೇ ನಮ್ಮನ್ನು ಇಡುವ–ತೆಗೆಯುವ ದೇವರಾಗಿ ಇದ್ದರೂ, ನಾವು ನಿನ್ನನ್ನೇ ದೇವರೆಂದು ಈವರೆಗೂ ಕರೆಯುತ್ತಿದ್ದೇವೆ. ಅಲ್ಲಿ ಇದ್ದ ನಿನಗೆ ಕೇಳಲಿ–ಕೇಳದಿರಲಿ–ನಾವಂತೂ ನಿನ್ನನ್ನೆ ಕರೆಯುತ್ತಿದ್ದೇವೆ. ಇನ್ನು ಅಲ್ಲಿಗೂ ಬಿಳಿ ಜಾತಿಯವರು ಬಂದು ನಿನ್ನನ್ನೋಡಿಸಿ ನಿಂತು ಬಿಟ್ಟರೆ, ನಮ್ಮ ಹಣಕಾಸು, ಹಕ್ಕು ಬಾಧ್ಯತೆಗಳು ಹೋದಂತೆಯೇ 'ದೇವಾ' ಎಂಬ ಕೂಗೂ ಅವರಿದ್ದಲ್ಲಿಗೇ ಹೋಗುತ್ತದಲ್ಲಾ. ಅವರೇ ನಮ್ಮ ದೇವರಾಗುತ್ತಾರಲ್ಲಾ! ಹೇ ದೇವ ದೇವಾ, ಹೇ ಪರಮೇಶ್ವರ ಹೇ ಪಾರ್ವತೀಪತೆ! ಹೇ ಎವರೆಸ್ಟ ನಿವಾಸ-ಹಾಗಾಗದಂತೆ ಈಗಲೇ ಜಾಗ್ರತೆ ತೆಗೆದುಕೊ!

'ವಿಠು'

---

ಶ್ರೀ. ತಿರುಮಲೇಶ ಆಲಂಗಾರು. | ## ಕವಿಶಿಷ್ಯರ ನೆನಪಿಗಾಗಿ | ಹತ್ತರಿ ಹಾಡಿನ ಮಟ್ಟು.

ನಮ್ಮ ನಾಡಿನ ವೀರ ಕವಿಗಳ ಸಾವು ಎಂದಿಗೆ ಸಾರಿತೋ!
ನಮ್ಮ ದೇಹದ ಹಳೆಯ ಕವಿಗಳ ಸೋಗು ಎಂದಿಗೆ ಆರಿತೋ!
ನಮ್ಮ ಜನಗಳ ಆಶೆಕೂಟವು ಅಂದಿಗೆಲ್ಲವು ತೀರಿತೋ!
ನಮ್ಮ ಹೃದಯವ ತಣಿಸಿ ಅವರದು ಎಲ್ಲಿಗಾದರು ಹೋಯಿತೊ!
"ಅವರೆ ನಮ್ಮಯ ಹಿರಿಯರು"
"ಅವರೆ ಕನ್ನಡದೊಡೆಯರು"
"ಅವರು ಈಗಲೆ ಅಳಿದರು"
ಅವರು ನಮ್ಮಯ ಮುದ್ದು ಕನ್ನಡದೊಡೆಯ ಕವಿಗಳು ವೀರರೂ!
ಅವರು ನಮ್ಮಯ ಹರುಷವೀಯುವ ಸುಖದ ಬೀಡಿನ ಮನುಜರೂ!
ಅವರು ನಡೆದರು ದಾರಿಕಾಣೆವು ಎಲ್ಲಿ ಪೋದರೊ! ಅರಿಯೆವೂ!
ಅವರ ಕಾಂಬುವ ಯೋಗವೆಂದಿಗೆ ಎಂಬುದನು ನಾವರಿಯೆವೂ!
"ಅವರೆ ನಮ್ಮಯ ಮಾತೆಯಾ"!
"ಕುವರರೊಬ್ಬರು ಖ್ಯಾತಿಯಾ"
"ಪಡೆದುದಿಂದದು ಹಾಸಿಯಾ"
ಆರು ಬರೆದರು ಎಳೆಯ ಮಕ್ಕಳ ಮನಕೆ ರಂಜಿಪ ಕಥೆಗಳ!
ಆರು ಬರೆದರು ಹಿರಿಯ ಜನರಿಗೆ ಅರಿಯದಂತಹ ವಿಷಯವಾ!
ಆರು ಬರೆದರು 'ಕೋಟಿಚೆನ್ನಯ' ಚೆನ್ನವಾಗಿಹ ಶೈಲಿಲೀ!
ಆರು ಪಡೆದರು ಅಗ್ರಸ್ಥಾನವ ರಾಯಚೂರಿನ ಸಭೆಯಲೀ!
"ಅವರೆ ನಮ್ಮನು ಅಗಲಿದಾ"
"ಕವನ ಕಟ್ಟಡ ಕಟ್ಟಿದಾ"
"ಕವಿಗಳೆಲ್ಲರ ಶಿಷ್ಯದಾ"
ತನ್ನ ಜೀವನವೆಲ್ಲ ಸಮಯದ ವಿದ್ಯೆಗಾಗಿಯೆ ಕಳೆದರೂ!
ತನ್ನ ಹೆಸರನು ಎಲ್ಲರೆದೆಯಲಿ ಮಾಸದಂತೆಯೇ ಬರೆದರೂ.
ತನ್ನ ಕವನವ ಹಿರಿಯ ಕಿರಿಯರ ಪಾಲಿಗೆನ್ನುತ ಬಿಟ್ಟರೂ!
ಮನ್ನವಾಗಿಹ ರನ್ನ ಭೂಮಿಯ ಬಾಳ್ವೆಯಾಶೆಯ ಬಿಟ್ಟರೂ!
"ಅವರೆ ಕನ್ನಡದೊಡೆಯರು"
"ನವ ಪಂಜೆಯ ಹಿರಿಯರೂ"
"ನಮಗೆ ಕೀರ್ತಿಯ ತಂದರೂ"

# ವಾರದ ಪಂಚಾಂಗ

ಬಹುಧಾನ್ಯ ಸಂ|ರದ ಶ್ರಾವಣ ಕೃಷ್ಣ ಪಕ್ಷ ದಕ್ಷಿಣಾಯನಂ ವರ್ಷರ್ತುಃ

ಕರ್ಕಟಿಕ (ಆಟಿ) ೨೯ರಿಂದ೩೧ ಮತ್ತು ಸಿಂಹ (ಸೋಣ) ೧ರಿಂದ೪೮ರ ವರೆಗೆ. ಮಹಾನಕ್ಷತ್ರ ಆಶ್ಲೇಷಾ—ಮಘಾ.

### ಆರ್ಯಭಟ ವಾಕ್ಯಕರಣರೀತ್ಯಾ ನಿತ್ಯಪಂಚಾಂಗಂ

| ಅಗೋಸ್ತು ತಾರೀಕು | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 14 | ೩ | ರ೨೨\|\| | ಪೂಭಾ೨೦\|\| | ಸ್ಕು೩೦\|\| | ಭ೨೨\|\| | ೪೫\| | ೯೪ | ಮಿಾನೇಚ೫ಪ್ರದೋಷಃಸಂಕಷ್ಟ೪ |
| 15 | ೪ | ಚ೨೨ | ಉ.ಭಾ೨೨ | ಧೃ೨೭\|\| | ಬಾ೨೨ | ೫೨\|\| | ೧೦ | ಹ್ತ೨ಶು೬ |
| 16 | ೫ | ಕು೨೦\|\| | ರೇ೨೨\| | ಶೂ೭೩\|\| | ತೈ೨೦\|\| | ೦ | ೧೬\|\| | ಸಿಂಹಸಂಕ್ರಮಃ೪೪\|\| ಮೇಷೇಚ ೨೨\|ಗರುಡ೫ಮಂಗಳಗೌರೀವ್ರತಂ |
| 17 | ೬ | ಬು೧೮ | ಅ್ವ೨೧\|\| | ಗಂ೧೯ | ವ೧೮ | ೧೧\|\|\| ೪೪\|\|\| | ೪ | ೧೧೧೪ಕೊಲ್ಲಂಶಕಾರಂ.ಆ್ಲ೩ಕು೨೫ ಬುಧವಕ್ರಾರಂ. ಪ್ರದೋಷಃ |
| 18 | ೭ | ಗು೧೪\| | ಭ೧೯\|\| | ವೃ೧೩\|\| | ಬ೧೪\| | ೪೮\|\| | ೫ | ವೃಷಭೇಚ೩೪ಹ್ತ೩ಶು೧೪ಸರ್ವ ಶ್ರೀಕೃಷ್ಣ ಜನ್ಮಾಷ್ಟಮಿಾ ಮನ್ವಾದಿಃ |
| 19 | ೮ | ಶು೧೦ ಶ೫\| | ಕೃ೧೭ | ಧ್ರು೭\| ವ್ಯಾ\|\|\| | ಕೌ೧೦ | ೫೪\|\|\| | ೧೧\| | ವಿಟ್ಲಪಿಂಡಿಹಬ್ಬ ಮ೨ರ೧೩ಮಿಥುನೇಚ೪೨ಹ೧ವಬು |
| 20 | ೯ | ಉ್ವ೫೪\| | ರೊ೧೩\|\|\| | ಉ್ವ೫೨\|\|\| | ಗ೫\| | ೨೬\|\|\| | ೬\|,೪೯\| | ೨೬ ಕಡೆಶ್ರಾವಣಶನಿವಾರ |

### ಕೇತಕೀ ದೃಕ್ಸಿದ್ಧರೀತ್ಯಾ ನಿತ್ಯಪಂಚಾಂಗಂ

| ಅಗೋಸ್ತು ತಾರೀಕು | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 14 | ೩ | ರ೬೨\| | ಪೂಭಾ೧೯\|\| | ಸ್ಕು೨೮\|\| | ಭ೨೨\| | ೪೪\|\|\| | ೨\| | ಮಿಾನೇಚ೩\|\|ವಕ್ರೀಬ.ಧಃಸಂಕಷ್ಟ೪ |
| 15 | ೪ | ಚ೨೩\|\| | ಉಭಾ೨೨\| | ಧೃ೨೭ | ಬಾ೨೩\|\| | ೫೪\|\| | ೯\|\|\| | ಹ೨ಶು೨೪ |
| 16 | ೫ | ಕು೨೩\|\|\| | ರೆ೨೪\| | ಶೂ೨೪\|\|\| | ತೈ೨೩\|\|\| | ೦ | ೧೮ | ಮಘಾರ್ಕಃ ಸಿಂಹಸಂಕ್ರಮಃ೩೦\|೧೪ ಮೇಷೇಷ೨೪\| [*೫೫\|\|\| |
| 17 | ೬ | ಬು೨೨\|\|\| | ಅ್ವ೨೫ | ಗಂ೨೧\| | ವ೨೨\|\|\| | ೧೫.ವಿ ೪೮ | ೭ | ಆ್ಲ೩ಕು೨ಂಕೊಲ್ಲಂ೧೧೧೪ವ್ಯಪ್ರ* |
| 18 | ೭ | ಗು೨೦\|\| | ಭ೨೪\|\| | ವೃ೧೭ | ಬ೨೦\|\| | ೫೪ | ೧೨\|\|\| | ವೃಷೇಚ೩೯ಹ೩ಶು೨೯ವ್ಯ.ನಿ.೧೨ ಶ್ರೀಕೃಷ್ಣಜನ್ಮಾಷ್ಟಮಿಾ |
| 19 | ೮ | ಶು೧೭ | ಕೃ೨೨\|\|\| | ಧ್ರು೧೧\|\|\| ವ್ಯಾ೫\| | ಕೌ೧೭ | ೦ ೧. ವಿ | ೧೭ ೧೨\| | ಮ೨ರ೫೭ಬುಧಾಸ್ತಃಪರೆಮನ್ವಾದಿಃ |
| 20 | ೯ | ಶ೧೨\| | ರೋ೧೯\|\|\| | ಉ್ವ೫೨\|\| | ಗ೧೨\| | ೩೨ \| | ಅ೫೫\| | ಮಿಥುನೇಚ೪೭\|\|\| |

# ಈ ವಾರದಲ್ಲಿ ನಿಮ್ಮ ಗ್ರಹಗತಿ ಹೇಗಿದೆ!

**ವಾರದ ಭವಿಷ್ಯ**



**ತಾರೀಕು ೧೪-೮-೧೯೩೮ರಿಂದ ತಾರೀಕು ೨೧-೮-೧೯೩೮ರ ವರೆಗೆ.**



ಮೇಷ:—

ನೀವು ಈ ವಾರದಲ್ಲಿ ಬಲು ಜಾಗರೂಕತೆಯಿಂದಿರಬೇಕು. ಆಪ್ತಮಿತ್ರರು ಬಂಧುಗಳು ಎಲ್ಲರೂ ನಿಮ್ಮ ಹಿತಚಿಂತಕರೆಂದು ನೀವು ಜಾಗ್ರತೆ ತಪ್ಪಿ ವರ್ತಿಸಬೇಡಿ. ನಿಮ್ಮ ಗ್ರಹಚಾರಬಲದಿಂದ ಪರಸ್ಪರ ಅವಿಶ್ವಾಸವು ಕಂಡುಬಂದು ಮಿತ್ರಭಾವವು ಶತ್ರುರೂಪದಲ್ಲಿ ಪರಿಣಮಿಸುವುದು. ನಿಮ್ಮ ಸಂಸಾರದಲ್ಲಿ ಗೃಹಚ್ಛಿದ್ರದಿಂದಾಗಿ ಹೆಂಡತಿ ಮಕ್ಕಳಲ್ಲಿ ಕಲಹವು ತಲೆದೋರಿ ಪರಸ್ಪರ ಅಗಲುವಿಕೆಯುಂಟಾಗಲಿದೆ. ನಿಮ್ಮ ಶತ್ರುಗಳಿಗೆ ಈ ವಾರವು ಅನುಕೂಲವಿರುವುದರಿಂದ ವೃದ್ಧಿಹೊಂದಿದ ಆ ಶತ್ರುಗಳಿಂದಾಗಿ ಅನೇಕ ವಿಪತ್ತು ಪೀಡೆಗಳುಂಟಾಗುವವು. ನಿಮ್ಮಲ್ಲಿ ಧೈರ್ಯದಿಂದ ಕಾರ್ಯವನ್ನು ಮುಂದರಿಸುವ ಶಕ್ತಿಯು ಇಲ್ಲದಿರುವುದರಿಂದ ವಿಘ್ನಗಳಿಂದಾಗಿ ನಿಮ್ಮ ಕಾರ್ಯವು ಅರ್ಧದಲ್ಲೇ ನಿಂತುಹೋಗುವುದು. ಧನನಾಶಕ್ಕೆ ಕಾರಣವಾದ ಅನರ್ಥಪರಂಪರೆಗಳು ದುಃಖಸಮೂಹಗಳು ಯಾವಾಗಲೂ ತಪ್ಪುವಂತಿಲ್ಲವು. ಆದರೂ ಗುರ್ವನುಗ್ರಹವೊಂದು ನಿಮಗಿರುವುದರಿಂದ ಈ ದೋಷಗಳ ಹೆಚ್ಚಿನಂಶವು ಅನುಭವಕ್ಕೆ ಬರಲಾರದು. ತಾ. 14, 15, 16, ಮತ್ತು 19, 20 ಈ ದಿನಗಳು ಅನಿಷ್ಟದಾಯಕಗಳು. ಮಾನಧನಕ್ಕೆ ಹಾನಿ, ಕಾರ್ಯಕ್ಕೆ ವಿಘ್ನ

ವೃಷಭ:—

ಈ ರಾಶಿಯಲ್ಲಿ ಹುಟ್ಟಿದವರಿಗೆ ಈ ವಾರವು ಹೆಚ್ಚಿನಂಶ ಶುಭಕರವಾಗಿರುವುದು. ಇವರಿಗೆ ಎಲ್ಲಾ ಭಾಗದಲ್ಲಿಯೂ ಉತ್ಸಾಹವು ತುಂಬಿ ತುಳುಕುತ್ತಿರುವುದು. ಯಾವ ಕಾರ್ಯದಲ್ಲಿ ಪ್ರವರ್ತಿಸಿದರೂ ಅದು ಇಚ್ಛೆಯನ್ನತಿಕ್ರಮಿಸಿ ಫಲಕೊಡುವುದು. ಚೋರರು ವ ಕಪಟಿಗಳಿಂದ ಅಪಹರಿಸಲ್ಪಟ್ಟ ಧನವು ಅನಾಯಾಸದಿಂದ ಯಾ ಆಕಸ್ಮಾತ್ತಾಗಿ ಇವರ ಕೈ ಸೇರುವುದು. ನಂಟರಿಷ್ಟರಲ್ಲೂ ಬಂಧುಬಳಗದವರಲ್ಲೂ ಕೂಡಾ ಹೆಚ್ಚಿನ ಗೌರವವನ್ನು ಹೊಂದುವುದಲ್ಲದೆ ಒಳ್ಳೆಯ ಉದ್ಯೋಗದಲ್ಲಿ ನಿರತರಾಗುವರು. ಗೃಹಕೃತ್ಯದ ಯಾವ ಭಾಗದಲ್ಲೂ ಕೊರತೆಯಿಲ್ಲವು. ವ್ಯವಹಾರದಲ್ಲಿ ಅನೇಕ ಹೊಸಜನರ ಪರಿಚಯವಾಗಿ ಮಿತ್ರವೃಂದವು ವೃದ್ಧಿಹೊಂದುವುದು. ಸ್ತ್ರೀ ನಿಮಿತ್ತದಿಂದಾಗಲೀ ಯಾ ಸ್ತ್ರೀಮೂಲಕವಾಗಿಯಾಗಲೀ ಧನಲಾಭಪಯೋಗವಿದೆ. ಆದರೂ ತಾ. 17ರಿಂದ20ರ ವರೆಗಿನ ದಿನಗಳಲ್ಲಿ ಕೀರ್ತಿಗೆ ಕಳಂಕ ಬರುವ ಅಕಾರ್ಯವು ಉಂಟಾಗಬಹುದು. ಅಂತೂ ವಿದ್ಯಾರ್ಥಿಗಳಿಗೆ ಈ ದಿನಗಳು ತುಂಬಾ ಹಾನಿಕರವಿದೆ. ಅಜ್ಞಾನದಿಂದಾಗಿ ಧನನಾಶಕ್ಕೆ ಕಾರಣವಾದ ಕಾರ್ಯಗಳು ತಾ. 17 ಮತ್ತು 18ರಲ್ಲೇ ಆಗಲಿವೆ.

ಮಿಥುನ:—

ಶುಭಾಶುಭಗಳು ಸಮಾನವಾಗಿರುವುದರಿಂದ ಇವರಿಗೆ ಈ ವಾರದಲ್ಲಿ ಇಷ್ಟಾನಿಷ್ಟ ಫಲಗಳು ಮಿಶ್ರವಾಗಿ ಪರಿಣಮಿಸುತ್ತವೆ. ಯಾಕೆಂದರೆ ನಿಸರ್ಗದಿಂದ ಶುಭರಾದ ಗ್ರಹರು ಗೋಚರದಲ್ಲೂ ಶುಭಸ್ಥಾನಗತರಾಗಿರುವರು. ಅಂತೆಯೇ ಸ್ವಭಾವದಿಂದ ಕ್ರೂರರಾದ ಗ್ರಹರು ಈಗಲೂ ಅನಿಷ್ಟಸ್ಥಾನಗತರಾಗಿಯೇ ಇರುವರು. ಆದಕಾರಣ ಲಾಭನಷ್ಟಗಳು ಜಯಾಪಜಯಗಳು ಇದ್ದೇ ಇವೆ. ಒಂದು ಕಾರ್ಯದಲ್ಲಿ ತುಂಬಾ ಲಾಭವಾದರೆ ಇನ್ನೊಂದರಲ್ಲಿ ಅದಕ್ಕೆ ಸರಿಯಾಗಿ ನಷ್ಟವೂ ಸಂಭವಿಸೀತು. ಒಂದು ಕಾರ್ಯವು ಯಶಸ್ವಿಯಾಗಿ ತನ್ನಂತೆಯೇ ಕೊನೆಗೊಂಡರೆ ಇನ್ನೊಂದು ಪ್ರತಿಕೂಲವಾಗಿ ಪರಿಣಮಿಸೀತು. ಇವರಿಗೆ ಕೃಷಿ ವಿಭಾಗದಲ್ಲಿ ತುಂಬಾ ಲಾಭವಾಗಲಿದೆ. ಮತ್ತು ಮನಸ್ಸಾಕ್ಷಿಗೆ ವಿರೋಧವಾಗಿ ಅನ್ಯಾಯವನ್ನು ಮಾಡುವರು. ಇದರಿಂದ ಯಾವಾಗಲೂ ಚಂಚಲವನುಸ್ಕರಾಗಿರುವರು. ಇವರ ನಡೆಯಿಂದಲೇ ಇದನ್ನು ಊಹಿಸಲು ಶಕ್ಯವಾಗುತ್ತದೆ. ಶತ್ರುಗಳ ಬೆದರಿಕೆಯೂ ರಾಜಕೀಯ ಸಂಬಂಧವಾದ ವ್ಯವಹಾರದ ಭಯವೂ ಸದಾ ಇವರನ್ನು ಅಂಟಿಕೊಂಡಿರುವುದು. ಸರ್ವ ಕಾರ್ಯಗಳಲ್ಲೂ ವಂಚನೆಯೇ ಕಾರ್ಯ ಸಾಧಿಸುವ ಮುಖ್ಯ ಸಾಧನವಾಗಿರುವುದಿವರಿಗೆ. ತಾ. 17ರ ಮೇಲೆ ಹೆಚ್ಚಿನಂಶ ಒಳ್ಳೆಯದಾಗಲಿದೆ.

ಕರ್ಕಾಟಕ:—

"ಯತೋ ಧರ್ಮಸ್ತತೋ ಜಯಃ" ಎಂದಂತೆ ಎಲ್ಲಿ ಧರ್ಮಾಚಾರಗಳಿವೆಯೋ ಅಲ್ಲಿ ಜಯವು ನಿಶ್ಚಯ. ಆದ್ದರಿಂದಲೇ ಪೂರ್ವಜರು "ಸತ್ಯಮೇವ ಜಯತೇ ನಾನೃತಂ" ಎಂದು ಉದ್ಘೋಷಿಸಿರುವರು. ಅಂದರೆ ಧರ್ಮಸ್ವರೂಪವಾದ ಸತ್ಯಕ್ಕೇನೇ ಯಾವಾಗಲೂ ಜಯುವೇ ಹೊರತು ಅಧರ್ಮರೂಪಿಯಾದ ಸುಳ್ಳಿಗೆ ಎಂದೂ ಜಯವಿಲ್ಲವು. ಈ ವಾರದಲ್ಲಿ ಈ ರಾಶಿಯವರಿಗೆ ಯಾವ ಕಾರ್ಯದಲ್ಲೂ ಜಯವು ಕಂಡುಬರುವುದಿಲ್ಲ. ಯಾಕೆಂದರೆ ಇವರು ಧರ್ಮಭ್ರಷ್ಟರಾದುದೇ ಇದಕ್ಕೆ ಮುಖ್ಯ ಕಾರಣ. ಧರ್ಮಸ್ಥಾನದಲ್ಲಿರತಕ್ಕ ಶನಿಯು ಇವರನ್ನು ಅಧರ್ಮದಲ್ಲಿ ಅನಾಚಾರದಲ್ಲಿ ಆಸಕ್ತರಾಗುವಂತೆ ಮಾಡುವನು. ಆದ್ದರಿಂದ ಇವರು ಮಾಡತಕ್ಕ ಪ್ರತಿಯೊಂದು ಕಾರ್ಯಗಳಿಗೂ ಶತ್ರುಗಳ ತಡೆಯು ಇದ್ದೇ ಇದೆ. ಅದರಲ್ಲೂ ಗುರುವು ಇವರನ್ನು ತೀರಾ ಕೈ ಬಿಟ್ಟಿರುವನೆಂದ ಮೇಲೆ ಕೇಳಬೇಕೇ? ಎಲ್ಲರಲ್ಲೂ ನಿಷ್ಠುರ, ಕಲಹಗಳು, ಎಲ್ಲೆಲ್ಲಿಯೂ ತಿರಸ್ಕಾರ ಅಪಮಾನ. ಆದಕಾರಣ ಎಷ್ಟು ಜಾಗರೂಕತೆಯಿಂದಿದ್ದರೂ ಅಷ್ಟರಮಟ್ಟಿನ ಒಳ್ಳಿತು. ತಾ. 14ರಿಂದ 16ರ ವರೆಗಿನ ದಿನಗಳು ಬಹಳ ಕೆಟ್ಟವೆ. ರಾಜಭಯ, ಶ್ರಮ.

ಸಿಂಹ:—

ಚಕ್ರವರ್ತಿಯ ಸಾಮ್ರಾಜ್ಯವಾದರೂ ಅದರ ಸ್ಥಿರತ್ವವಾಗಲೀ ಅಸ್ಥಿರತ್ವವಾಗಲೀ ಕೇವಲ ಆತನ ಮುಖ್ಯ ಆಪ್ತಮಂತ್ರಿಯ ಚಾಣಾಕ್ಷತೆಯನ್ನನುಸರಿಸಿಕೊಂಡಿರುವುದು. ರಾಜನು ಮಿತ್ರಬಲ, ಕೋಶಬಲ

ಸೇನಾಬಲ ಇತ್ಯಾದಿ ಬಲಗಳಿಂದ ರಹಿತ ನಾಗಿದ್ದರೂ ಯಾ ಸ್ವಯಂ ಅಸಮರ್ಥ ನಾಗಿದ್ದರೂ ಮಂತ್ರಿಯು ತನ್ನ ದಂಡ ನೀತಿ ಮತ್ತು ಸಾಮದಾನಾದಿ ಚತುರೋ ಪಾಯಗಳಿಂದ ಎಂತಹ ಬಲಶಾಲಿಯಾದ ಶತ್ರುಗಳನ್ನೂ ಕೂಡಾ ಜಯಿಸಬಲ್ಲನು. ಅಂತೆಯೇ ಈ ರಾಶಿಯವರು ಕೇವಲ ಸುರಾಸುರ ಮಂತ್ರಿಗಳಾದ ಬೃಹಸ್ಪತಿ ಮತ್ತು ಶುಕ್ರಾಚಾರ್ಯರ ಬಲದಿಂದಲೇ ತಮಗೆ ಬರುವ ಸಕಲ ವಿಪತ್ತುಗಳನ್ನೂ ನೀಗಿಸಿಕೊಳ್ಳಲು ಸಮರ್ಥರಿರುವರು. ಇತರ ಅನಿಷ್ಟ ಗ್ರಹರಿಂದ ಇವರಿಗೆ ಈ ವಾರದಲ್ಲಿ ಆರೋಗ್ಯವು ಕೆಟ್ಟು ದೇಹದಲ್ಲಿ ಉರಿಜ್ವರವು ತಲೆದೋರುವುದು. ಮತ್ತು ಪಿತ್ಥವಿಕಾರದ ರೋಗಗಳು ಕಂಡುಬರುವವು. ನಿಷ್ಠುರ ನುಡಿ, ದುರ್ನಡತೆಯು ಇವರ ಹೆಂಡತಿ ಮಕ್ಕಳಿಗೆ ಸರಿದೋರದೆ ಅವರಿಂದ ವಿಯೋಗ ಹೊಂದಬೇಕಾಗುವುದು. ಆದಕಾರಣ ಈ ಆಪತ್ತುಗಳನ್ನು ಸುಲಭದಿಂದ ನೀಗಿಸಿಕೊಳ್ಳಲು ಗುರು ಶುಕ್ರರ ಅನುಗ್ರಹವು ಅತ್ಯಾವಶ್ಯಕ. ಅದಕ್ಕಾಗಿ .ಅವರವರ ಧರ್ಮಭ್ರಷ್ಟರಾಗದೆ ಇದ್ದು ಸತ್ಸಂಗವನ್ನೇ ಮಾಡತಕ್ಕದ್ದು. ತಾ. 1೭ರಿಂದ 18ರ ವರೆಗಿನ ದಿನಗಳು ಸಾಮಾನ್ಯಗಳು. ಅನಿಷ್ಟ, ಅಪಮೃತ್ಯು ಭಯ.

**ಕನ್ಯಾ:—**

ಈ ರಾಶಿಯಲ್ಲಿ ಜನಿಸಿದವರಿಗೆ ಈ ವಾರವು ಹೆಚ್ಚಿನಮಟ್ಟಿಗೆ ಕೆಟ್ಟದ್ದೇ ಎನಬೇಕು. ವ್ಯಾಪಾರ ಮಾಡತಕ್ಕವರಿಗೆ ಯಾವಭಾಗದಲ್ಲೂ ಲಾಭವಿಲ್ಲವು. ಕೋರ್ಟು ಕಚೇರಿಗಳಲ್ಲೂ ಸೋಲೇ ಪ್ರಾಪ್ತಿಯು. ಅನಿಷ್ಟಗಳ ಸಮೂಹವೇ ಇವರನ್ನು ಆಕ್ರಮಿಸಿ ಕೊಂಡಿರುತ್ತದೆ. ದೇಹದಲ್ಲಿನ ಅನಾರೋಗ್ಯದ ದೆಸೆಯಿಂದಲೂ, ಶತ್ರುಗಳ ಕಾಟದಿಂದಲೂ ಕೂಡಾ ಮನಸ್ಸಿಗೆ ನೆಮ್ಮದಿಯಿಲ್ಲವು. ಈ ಮನೋವ್ಯಥೆಗೆ ಯಾವ ರೀತಿಯಲ್ಲೂ ಶಾಂತಿಯಿಲ್ಲವು. ಆದಕಾರಣ ಚಂಚಲವಾದ ಮನಸ್ಸು ಇವರನ್ನು ನಿಂತಲ್ಲಿ ನಿಲ್ಲಗೊಡುವುದಿಲ್ಲವು. ಅಂತೂ ಹಳೇ ಮಿತ್ರರ ಸಮಾಗಮದಿಂದಲೂ ಹೊಸ ಮಿತ್ರರ ಲಾಭದಿಂದಾಗಿಯೂ ಮನೋವ್ಯಾಧಿಯು ಕಡಿಮೆಯಾಗುವುದು. ಇದ್ದುದರಲ್ಲಿ ತಾ. 14 ರಿಂದ 16ರ ವರೆಗಿನ ದಿನಗಳು ಸ್ವಲ್ಪ ಮಟ್ಟಿಗೆ ಒಳ್ಳೆಯದಿವೆ. ಸ್ಥಾನಮಾನಗಳು ಸಿಗಲಿವೆ.

**ತುಲಾ:—**

ನಿಮ್ಮ ಭಾಗ್ಯರವಿಯು ಉದಯಿಸಿರುವನು. ಅದೃಷ್ಟ ಪರೀಕ್ಷೆಯ ಸುಸಂಧಿಯೊದಗಿದೆ. ಆದಕಾರಣ "ಪ್ರಯತ್ನಃ ಖಲು ಕರ್ತವ್ಯಃ ಫಲಂ ಮಾರ್ಜಾರವದ್ಭವೇತ್, ಜನ್ಮ ಪ್ರಭೃತಿ ಗೌರ್ನಾಸ್ತಿ ಕ್ಷೀರಂ ಪಿಬತಿ ನಿತ್ಯಶಃ" ಎಂಬಂತೆ ನೀವು ಕಾರ್ಯದಲ್ಲಿ ಹೆಚ್ಚಿನ ಆಸಕ್ತಿಯಿಂದ ಪ್ರವರ್ತಿಸಿದರೆ ಅತ್ಯಧಿಕ ಫಲವನ್ನು ಹೊಂದುವುದರಲ್ಲಿ ಸಂದೇಹವಿಲ್ಲ. ಹೇಗೆಂದರೆ ಹುಟ್ಟಿದಂದಿನಿಂದ ದನದ ಮುಖವನ್ನು ಸಹ ನೋಡದಿರುವ ಬೆಕ್ಕು ಪ್ರತಿ ದಿನವೂ ಹಾಲು ಕುಡಿಯುವುದಿಲ್ಲವೇ? ಆದಕಾರಣ ಅನುಕೂಲವಾದ ಕಾಲವು ಬಂದೊದಗಿರುವಾಗ "ಗಾಳಿ ಬಂದಾಗ ತೂರಿಕೊಂಡದ್ದೇ ಬಂತು" ಎಂಬಂತೆ ಕಾರ್ಯದಲ್ಲಿ ಪ್ರವರ್ತಿಸಿದಲ್ಲಿ ಮುಂದೆ ತುಂಬ ಅನುಕೂಲವಾಗುವುದು. ಎಲ್ಲಾ ಭಾಗದಲ್ಲೂ ಶುಭವಾಗುವುದು. ಸಮಾಜದಲ್ಲಿ ಗೌರವವನ್ನು ಪಡೆವಿರಿ. ಉದ್ಯೋಗವನ್ನಪೇಕ್ಷಿಸುವವರು ಈ ವಾರದಲ್ಲೇ ಪ್ರವರ್ತಿಸಬೇಕು. ಲಾಟರಿ ಮುಂತಾದವುಗಳಲ್ಲಿ ಹೆಚ್ಚಿನ ಲಾಭವಾಗುವದು. ನಿಮ್ಮ ಅದೃಷ್ಟ ಬಲದಿಂದಾಗಿ ನಿಮ್ಮ ಶತ್ರುಗಳು ಶತ್ರುತ್ವವನ್ನು ಬಿಟ್ಟು ಪೂಜ್ಯ ಭಾವವನ್ನಿಡುವರು. ಬಹಳ ಸಮಯದಿಂದ ಅಪೂರ್ಣವಾಗಿರುವ ನಿಮ್ಮ ಮನೋರಥವು ಪೂರ್ಣವಾಗುವುದು. ಆದರೆ ಪ್ರತಿಯೊಂದು ಕಾರ್ಯವನ್ನು ಮುಂದೊತ್ತುವ ವಿಷಯದಲ್ಲಿ ನೀವು ಸ್ವಲ್ಪ ಭಯಪಡುವಿರಿ. ಅದು ಸರಿಯಲ್ಲವು. "ಧೈರ್ಯಂ ಸರ್ವತ್ರ ಸಾಧನಂ" ಎಂಬ ಆರ್ಯೋಕ್ತಿಯಂತೆ ಧೈರ್ಯವನ್ನವಲಂಬಿಸಿ ಕಾರ್ಯದಲ್ಲಿ ಪ್ರವರ್ತಿಸಿರಿ. ಜಯಶೀಲರಾಗುವಿರಿ. ತಾ. ೧೪ರಿಂದ ೧೮ರ ತನಕದ ದಿನಗಳು ಅತ್ಯುತ್ತಮವಿರುವವು.

**ವೃಶ್ಚಿಕ:—**

ಈ ವಾರವು ನಿಮಗೆ ಹೆಚ್ಚಿನಂಶ ಕೆಡುಕಿನದ್ದಲ್ಲವು. ಅನಿಷ್ಟಕಾರಕ ಗ್ರಹರಿಂದಾಗಿ ದೇಹದಲ್ಲಿ ಪೀಡೆಯು ಉಂಟಾಗುವುದು. ನೀವು ಕೈಗೊಂಡ ಕಾರ್ಯದಲ್ಲಿ ನಷ್ಟ ಮತ್ತು ವಿರೋಧಗಳೇ ಹೆಚ್ಚಾಗುವುದರಿಂದ ತುಂಬಾ ಚಿಂತಾಕುಲರಾಗುವಿರಿ. ಧಾತುಕ್ಷಯದಿಂದಾಗಿ ದೇಹವು ಕ್ಷೀಣವಾಗುವುದು. ಮನುಷ್ಯನಿಗೆ ಶತ್ರುಗಳಿಂದಾಗಿ ಒಂದು ಕಷ್ಟವು ಪ್ರಾಪ್ತವಾದರೆ ಅದೊಂದು ವಿಶೇಷ ವಿಷಯವಾಗಿ ಪರಿಗಣಿಸಲ್ಪಡುವುದಿಲ್ಲ. ಯಾಕೆಂದರೆ ಅವರು ಹೇಗೂ ವಿರೋಧಿಗಳು. ವಿರೋಧವನ್ನೇ ಮಾಡತಕ್ಕವರು. ಆದರೆ ನಮ್ಮ ಹಿತ ಚಿಂತಕರಾದ ಆತ್ಮೀಯರು ನಮಗೆ ಕೇಡನ್ನು ಬಗೆದರೆ ವ ನಮ್ಮಲ್ಲಿ ವಿರೋಧವನ್ನು ಮಾಡಿದರೆ ಅದು ಅಸಹನೀಯ ವೇದನೆಯನ್ನುಂಟುಮಾಡುವುದು. ಅಂತೆಯೇ ನಿಮ್ಮವರೇ ನಿಮಗೆ ವಿರುದ್ಧವಾಗಿರುವರೆಂಬುದನ್ನು ನೀವು ಕಾರ್ಯಾನಂತರದಲ್ಲಿ ತಿಳಿದುಕೊಳ್ಳುವಿರಿ. ಆದರೂ ಇಷ್ಟಗ್ರಹರಿಂದಾಗಿ ಅಂತ್ಯದಲ್ಲಿ ವಿಷಯದ ಮರ್ಮವನ್ನು ತಿಳಿದ ಮೇಲೆ ನಿಶ್ಚಿಂತರಾಗುವಿರಿ. ತಾ. ೧೪ ರಿಂದ ೧೮ರ ವರೆಗಿನ ದಿನಗಳು ಪ್ರತಿಕೂಲಗಳಾಗಿವೆ.—

**ಧನು:—**

"ರಾಮೇಶ್ವರಕ್ಕೆ ಹೋದರೂ ಶನೀಶ್ವರನು ಬಿಡ" ಎಂದಂತೆ ಈ ರಾಶಿಯವರ ಅವಸ್ಥೆ ಇರುವುದು. ಇವರು ಕಷ್ಟದ ಪರಾಕಾಷ್ಠತೆಯನ್ನೇ ಹೊಂದಿರುವರೆಂದು ನಿಸ್ಸಂಕೋಚವಾಗಿ ಹೇಳಬಹುದು. ಯಾಕೆಂದರೆ ಇವರಿಗೆ ಯಾವನೊಬ್ಬ ಗ್ರಹನೂ ಅನುಕೂಲವಿಲ್ಲವೆಂದರೆ ಇವರದು ದೈವವೆಂದು ಬೇರೆ ಹೇಳಬೇಕೇ? ಈ ವಾರದಲ್ಲಿ ಈ ರಾಶಿಯವರ ಕಾರ್ಯಗಳೊಂದೂ ಕೊನೆಗೊಳ್ಳುವಂತಿಲ್ಲ. ಒಂದು ವೇಳೆ ಕೊನೆಗೊಂಡರೂ ಆ ಬಗ್ಗೆ ತುಂಬಾ ಧನವ್ಯಯವಾಗಿ ಅನಿಷ್ಟವಾಗಿ ಪರ್ಯವಸಾನ ಹೊಂದುವುದು ಅಷ್ಟೇ. ದೇಹಾರೋಗ್ಯವು ಕೆಡುವುದು. ದೇಹವು ನಿಸ್ತೇಜವಾಗುವುದು. ಸರ್ವತ್ರ ಮಾನಕ್ಕೇ ಭಂಗಬರುವುದು. ಮುಂಚಿನ ಗೌರವವೂ ನಾಶವಾಗುವುದು. ಸ್ವಕೀಯರು ಇವರ ವಕ್ರ ಬುದ್ಧಿಗೆ ಮತ್ತು ದುರ್ಮನಸ್ಸಿಗೂ ಕೂಡ ಹೇಸಿ ತ್ಯಜಿಸುವರು. ಏಕಾಂಗಿಯಾದವರು ಬುದ್ಧಿಶೂನ್ಯರಾಗಿ

ಚಂಚಲ ಚಿತ್ತರಂತೆ ವರ್ತಿಸುವರು. ತಾ. ೧೪ ರಿಂದ ೧೬ರ ವರೆಗಿನ ದಿನಗಳೂ ಅತ್ಯಂತ ಹಾನಿಕರಗಳಾಗಿವೆ—

ಮಕರ:—

ಈ ರಾಶಿಯವರ ಮಟ್ಟಿಗೆ ಈ ವಾರವು ಸ್ವಲ್ಪ ಮಟ್ಟಿನ ಉತ್ತಮವೇ ಇರುವುದು. ಕೇವಲ ರವಿ ಕುಜರು ಕೆಟ್ಟಿರುವುದರಿಂದ ಸ್ವಂತ ಸ್ತ್ರೀಯಲ್ಲಿ ಕಲಹ ಮತ್ತು ಹೊಟ್ಟೆ ನೋವು ಇವು ತೋರಬಹುದು. ಆದರೂ ಇತರ ಗ್ರಹರೆಲ್ಲರೂ ಉತ್ತಮರಿರುವುದರಿಂದ ಯಾವ ಕಾರ್ಯದಲ್ಲಿ ಪ್ರವರ್ತಿಸಿದರೂ ಅದರಲ್ಲಿ ಜಯವೇ ಆಗುವುದು. ಧನಸಂಬಂಧಿಗಳಾದ ಕಾರ್ಯಗಳಲ್ಲಿ ಹೆಚ್ಚಿನ ಲಾಭವಾಗುವುದು. ಧರ್ಮ ಕರ್ಮಗಳಲ್ಲಿ ಆಸಕ್ತಿ ಹೆಚ್ಚುವುದು. ಎಲ್ಲರಿಗೂ ಬೇಕಾದವರಾಗಿ ಸಮಾಜದಲ್ಲಿ ಒಳ್ಳೇ ಸ್ಥಾನಮಾನಗಳನ್ನು ಪಡೆಯುವರು. ಇವರ ಆಜನ್ಮ ಶತ್ರುವೂ ಮಿತ್ರನಾಗುವನು. ಶತ್ರು ನಿಗ್ರಹದಲ್ಲಿ ಅಸಮರ್ಥರಾಗಿದ್ದರೂ ಬಲಿಷ್ಠರಾದ ಶತ್ರುಗಳೂ ಕೂಡ ಮುಂಗುಸಿಯನ್ನು ನೋಡಿದ ಸರ್ಪರಂತಾಗುವರು. ತಾ. 17ರಿಂದ 20ರ ವರೆಗೆ ಸ್ವಲ್ಪ ಕೆಟ್ಟದ್ದೇ. ಅಪನಂಬಿಕೆ, ಉದರ ರೋಗ, ಮನಸ್ಸಿಗೆ ಅತೃಪ್ತಿ.

ಕುಂಭ:—

ಇಷ್ಟಾನಿಷ್ಟಗ್ರಹರ ಬಲ ತುಲನೆ ಮಾಡಲು ಅನಿಷ್ಟ ಗ್ರಹರೇ ಸ್ವಲ್ಪ ಬಲ ಶಾಲಿಗಳಾಗಿರುವರು. ಆದರೂ ಹೆಚ್ಚಿನ ಕೆಡುಕೇನು ಸಂಭವಿಸಲಾರದು. ಆರೋಗ್ಯವಂತರಾದ ಇವರಿಗೆ ಧನ ಸಂಬಂಧವಾದ ದುಃಖವು ಅಂಟಕೊಂಡು ಇವರ ಸುಖವನ್ನೇ ಹಾಳು ಮಾಡುವುದು. ಯಾವ ಚಿಕ್ಕ ಕಾರ್ಯವೇ ಆಗಲಿ, ಅದನ್ನು ಕೊನೆಗಾಣಿಸುವ ಬಲವು ಯಾ ಸಾಹಸವು ಇವರಲ್ಲಿ ತೋರಿಬರುವುದಿಲ್ಲ. ಪರರಲ್ಲಿ ವ್ಯರ್ಥವಾಗಿ ಕಲಹ ಮಾಡುವುದರಿಂದ ಗೌರವವು ನಾಶವಾಗಿ ಮಾನಕ್ಕೇ ಹಾನಿಯಾಗುವುದು. ಆದರೂ ಇತರ ಶುಭಗ್ರಹರಿಂದಾಗಿ ಕಲಹವು ದೀರ್ಘಕಾಲ ಉಳಿಯದೆ ಅಲ್ಲಿಯೇ ಕೊನೆಗೊಳ್ಳುವುದು. ಕೈಕೊಂಡ ಕಾರ್ಯದಲ್ಲಿ ಪ್ರಯತ್ನಕ್ಕೆ ತಕ್ಕ ಪ್ರತಿಫಲ ದೊರೆಯುವುದು. ತಾ. 14ರಿಂದ 16 ಮತ್ತು 20 ಈ ದಿನಗಳು ಹಿತಕರವಲ್ಲವು. ಧನ ಹಾನಿ, ಮಾನಭಂಗ.

ಮೀನ:—

"ದುರ್ದೈವ: ಪುರುಷೋ ಯತ್ರ ಯಾತಿ ತತ್ರೈವ ಚಾಪದ:" ವಾದಂತೆ ಅದೃಷ್ಟ ಹೀನನಾದ ನರನು ಎಲ್ಲಿಗೆ ಹೋದರೂ ಅವನಿಗೆ ಬರತಕ್ಕ ಆಪತ್ತು ಅವನನ್ನನುಸರಿಸಿಕೊಂಡೇ ಹೋಗುತ್ತವೆ. ನಮ್ಮ ಮೀನ ರಾಶಿಯವರ ರೀತಿಯೂ ಇಷ್ಟಕ್ಕೆ ಬಂದಿರುತ್ತದೆ. ಅಂದರೆ ಇವರಿಗೆ ಯಾವ ಭಾಗದಲ್ಲೂ ನೆಮ್ಮದಿಯಿಲ್ಲವು. ಅತ್ತ ಸಂಸಾರದ ಕಡೆ ನೋಡಿದರೆ ಮಕ್ಕಳಿಗೆ ಮಡದಿಗೆ ಒಂದಲ್ಲೊಂದು ಆಪತ್ತು. ಇದರಿಂದಾಗಿ ಶೋಕ ತಪ್ಪಿದ್ದಲ್ಲ. ಹಣದ ಖರ್ಚು ಕಡಿಮೆಯಾಗುವಂತಿಲ್ಲ. ಹೊರಗಿನ ವ್ಯವಹಾರದಲ್ಲೋ ಅದರ ಪರಿ ಹೇಳಿ ತೀರದು. "ಮುಟ್ಟಿದ್ದೆಲ್ಲಾ ಮಸಿ"ಎಂಬಂತೆ ಯಾವ ಲಾಭದಾಯಕವಾದ ಕಾರ್ಯವನ್ನು ಕೈಗೊಳ್ಳಲಿ, ಅಲ್ಲಿ ಏನಾದರೊಂದು ವಿಪತ್ತು ಸಂಭವಿಸಿ ಒಂದಕ್ಕೆ ಎರಡರಷ್ಟು ಖರ್ಚೇ ಆಗುವದು. ಮತ್ತು ವಿಷ, ಅಗ್ನಿ ಸಂಬಂಧವಾದ ಭಯ, ಸ್ವಜನರ ನಿಯೋಗ ಇತ್ಯಾದಿಗಳಿಂದ ಮನಸ್ಸಿಗೆ ಸಂಸಾರದಲ್ಲೇ ಬೇಜರ ತೋರಿ ಊರನ್ನೇ ಬಿಡುವ ಪರಿಸ್ಥಿತಿ ಬಂದೊದಗುವುದು. ಆದ ಕಾರಣ ಈ ನವಗ್ರಹರ ಪ್ರೀತಿ ಸಂಪಾದನೆಗಾಗಿ ತಕ್ಕ ಉಪಚಾರವನ್ನು ಮಾಡಿದರೆ ಬಹಳ ಒಳ್ಳೆಯದು. ತಾ. 17, 18, ಈ ದಿನಗಳು ಬಹಳ ಅನಿಷ್ಟವಿದೆ. ಧನ ಮಾನ ಹಾನಿ—

**ಬಾಲಭಾಸ್ಕರ.**

---

ತರುಣ ಗಂಡ:—(ಏನಾಯಿತೆಂದು ತಬ್ಬಿಬ್ಬಾಗಿ) 'ಶಾಂತೀ, ರಾಮು ಆಫೀಸಿಗೆ ಬಂದು ನೀನು ನನ್ನನ್ನು ಬರಲಿಕ್ಕೆ ಹೇಳಿದೆಯೆಂದು ಹೇಳಿದ. ಏನಾಯಿತು?. . . . ಮಗು. . . . ಎಲ್ಲಿದೆ?'

ಮುದ್ದು ಮಡದಿ:—'ಗಲಭೆಯೇನೂ ಇಲ್ಲ, ರತ್ನ ಬಾಯೊಳಗೆ ಬೆರಳು ಹಾಕಿಕೊಂಡಿದ್ದಾಗ ನನಗೆ ಸುಂದರವಾಗಿ ಕಂಡ. ನೀವು ಕೂಡಾ ನೋಡಿ ಬಿಡಿರೆಂದು ಹೇಳಿ ಕಳುಹಿಸಿದೆ. ಈಗ ನಿದ್ದೆ ಮಾಡಿದ್ದಾನೆ'

---

# ಬೀಡಿ-ಸಿಗರೇಟ್

**ಅಂತರಂಗದ ವಾಚಕನೆ,**

ಕಳೆದ ವಾರ ನಶ್ಯದ ದುರಾಭ್ಯಾಸದ ವಿಚಾರವಾಗಿ ನಿನಗೆ ಎರಡು ಮಾತು ಹೇಳಿದ್ದೇನೆ. ಬೀಡಿ-ಸಿಗರೇಟಿನಿಂದ ನಮ್ಮ ಜನರು ಹಾಳಾಗುತ್ತಿರುವುದನ್ನು ನೋಡುವಾಗ ನನಗೆ ಬಹಳ ವ್ಯಸನವಾಗುತ್ತದೆ. ಬೀಡಿ-ಸಿಗರೇಟಿನ ದುರಭ್ಯಾಸ ನಮ್ಮ ಸರ್ವನಾಶಕ್ಕಾಗಿ ಎಲ್ಲಿಂದ ಬಂತೋ ದೇವರೇ! ಯೋಚಿಸುವಾಗ ಕಷ್ಟವಾಗುತ್ತದೆ.

ಈಗ ಎಲ್ಲರ ಬಾಯಿಯಲ್ಲಿಯೂ ಹೊಗೆ ಬತ್ತಿ. ಬಡವನಾದರೆ ಬೀಡಿ. ಹಣವಂತನಾದರೆ ಸಿಗರೇಟು. ಬೆಂಕಿಕಡ್ಡಿ ಗೀರಿ ಹೊಗೆಬತ್ತಿಯನ್ನು ಹಚ್ಚಿ ಒಂದು ಸಲ ಹೊಗೆ ಬಿಡುವಾಗ ತಾನು ಯಾವ ದೊಡ್ಡ ಯಾಗ ಮಾಡಿದವನಂತೆ ತೋರಿಸಿಕೊಳ್ಳುತ್ತಾನೆ! ಯಾವ ಸಾರ್ಥಕಕ್ಕಾಗಿ ಈ ಕೆಲಸ ಮಾಡುತ್ತೀ ಎಂದು ಕೇಳಿದರೆ ಯಾವ ಉತ್ತರವನ್ನೂ ಕೊಡದೆ ಸುಮ್ಮನೆ ನೆಗಾಡುತ್ತಾನೆ ದಿನ ಒಂದಕ್ಕೆ ನೂರು ಬೀಡಿಯನ್ನು ಕೊಂಡುಕೊಳ್ಳುವ ಪುಣ್ಯಾತ್ಮನೂ ಇದ್ದಾನೆ. ಅದನ್ನೆಲ್ಲಾ ಅವನೊಬ್ಬನೇ ಸೇದುವುದಿಲ್ಲ. ತಾನು ಬೀಡಿ ಸೇದುವಾಗ ಹತ್ತಿರ ಇದ್ದವರಿಗೆಲ್ಲರಿಗೂ ಬೀಡಿ ಹಂಚುವುದು ಸಭ್ಯತನದ ಲಕ್ಷಣವಂತೆ. ಇತರರ ದಾನದ ಬೀಡಿಯಿಂದಲೇ ದಿನ ತೆಗೆಯುವ ಮಹಾತ್ಮರೂ ಅನೇಕರಿದ್ದಾರೆ. ದಿನಕ್ಕೆ ಒಂದು ಬೆಂಕಿಪೆಟ್ಟಿಗೆ ಹೇಗೂ ಒಬ್ಬ ಬೀಡಿ ಸೇದುವವನಿಗೆ ಬೇಕು. ಉಪಕಾರಕ್ಕೆ ಬೀಳುವ ಯಾವ ಪದಾರ್ಥವನ್ನು ಇತರರಿಗೆ ಕೊಡದವನೂ ಇತರರಿಗೆ ಹೊಗೆಸೊಪ್ಪಿನ ದುರಾಭ್ಯಾಸ ಮಾಡಿಸಲಿಕ್ಕಾಗಿ ಎಷ್ಟು ದಾನ ಮಾಡಲಿಕ್ಕೂ ಸಿದ್ಧನಿದ್ದಾನೆ. ಹೀಗೆ ಬೀಡಿ-ಸಿಗರೇಟು ಸೇದುವವನ ಸ್ನೇಹ ಮಾಡುವವನು ಸ್ವಲ್ಪ ಕಾಲದಲ್ಲಿಯೇ ಆ ಅಭ್ಯಾಸಕ್ಕೆ ಬಲಿ ಬೀಳುತ್ತಾನೆಂಬುದರಲ್ಲಿ ಸಂಶಯವಿಲ್ಲ.

ನಶ್ಯ ಹಾಕುವವನಿಗಿಂತಲೂ ಬೀಡಿ-ಸಿಗರೇಟು ಸೇದುವವನು ಇನ್ನಷ್ಟು ಕಶ್ಮಲನು. ಕ್ರಮೇಣ ಅವನ ತುಟಿಗಳು ಕಪ್ಪಾಗುತ್ತವೆ. ನಶ್ಯ ಹಾಕುವವನ ಹತ್ತಿರ ಬರುವಾಗ ಮಾತ್ರ ದುರ್ವಾಸನೆ. ಬೀಡಿ-ಸಿಗರೇಟು ಸೇದವವನು ದೂರದಲ್ಲಿದ್ದರೂ ದುರ್ವಾಸನೆ ಇದೆ. ಬೀಡಿ ಸೇದುವವರಿಗೆ ಇದು ಅಷ್ಟು ಗೊತ್ತಾಗುವುದಿಲ್ಲ. ಬೀಡಿ ಸೇದದವರಿಗೆ ಇವರ ಹತ್ತಿರ ಕುಳಿತರೆ ವಾಂತಿ ಬರುವಷ್ಟು ಅಸಹ್ಯವಾಗುತ್ತದೆ. ಬಸ್ಸುಗಳಲ್ಲಿ ಈ ಕಷ್ಟವನ್ನು ಹೇಳಿ ತೀರದು. ತಾನು ದೊಡ್ಡ ಧೊರೆಯೆಂದೆಣಿಸಿ ಫಸ್ ಕ್ಲಾಸಿನಲ್ಲಿ ಕುಳಿತು ಸಿಗರೇಟು ಸೇದಿ ತನ್ನ ಹೊಗೆಯನ್ನು ಹಿಂದಿನ ಸೀಟಿನಲ್ಲಿರುವ ನಿರಪರಾಧಿ ಸ್ತ್ರೀಯರ ಮೇಲೆ ಬಿಡುವವನನ್ನು ಹಿಡಿದು ಕೆಳಗೆ ಎಳೆದು ಹಾಕಿ, ಕುದುರೆಯ ಚಬುಕಿನಿಂದ ಹೊಡೆದರೂ ತಪ್ಪಾಗದು. ಈ ಹೊಗೆಯನ್ನು ಸಹಿಸಲಾರದೆ ಎಷ್ಟೋ ಸ್ತ್ರೀಯರು ವಾಂತಿ ಮಾಡುವುದನ್ನು ನಾನೆಷ್ಟೋ ಸಲ ನೋಡಿದ್ದೇನೆ. ತನ್ನನ್ನು ಅಸಹ್ಯ ವಸ್ತುವೆಂದು ಇತರರು ತ್ಯಜಿಸುತ್ತಿರುವರೆಂದು ಬೀಡಿ ಸಿಗರೇಟು ಸೇದುವವನಿಗೆ ಗೊತ್ತಿದೆಯೋ ಎಂದು ನನಗೆ ಸಂಶಯವಿದೆ.

ಬೀಡಿ ಸೇದುವ ರೋಗವು ಸುಲಭದಲ್ಲಿ ಪ್ರಾರಂಭವಾಗುತ್ತದೆ. ಸಣ್ಣ ಹುಡುಗರು ತಮ್ಮ ಬಾಯಿಯಿಂದ ಹೊಗೆ ಬಿಡುವ ತಮಾಷೆ ನೋಡುವುದಕ್ಕಾಗಿಯೇ ಪ್ರಥಮತಃ ಬೀಡಿಯನ್ನು ಸೇದುತ್ತಾರೆ. ಸ್ವಲ್ಪ ಕಾಲದೊಳಗೆ ಈ ರೋಗವು ಇವರನ್ನು ಅಂಟಿಕೊಳ್ಳುತ್ತದೆ. ನಂತರ ಅವರು ಬೀಡಿಯ ಗುಲಾಮರಾಗಿ ಹೋಗುತ್ತಾರೆ. ಹಿಂದಿನ ಕಾಲದಲ್ಲಿ ಬೀಡಿ-ಸಿಗರೇಟು ಎಳೆಯುವುದು ಅಸಭ್ಯತನವೆಂಬ ಅಭಿಪ್ರಾಯವಿತ್ತು. ಈಗ ಅದಕ್ಕೊಂದು ಗೌರವ ದೊರೆತಿದೆ. ಮದುವೆ ಚಪ್ಪರಗಳಲ್ಲಿಯೂ ತಾಂಬೂಲದ ಹರಿವಾಣದಲ್ಲಿ ನಾಲ್ಕು ಕಟ್ಟು ಬೀಡಿಯೂ ಒಂದು ಬೆಂಕಿಪೆಟ್ಟಿಗೆಯೂ ಬೀಳತೊಡಗಿದೆ. ದೊಡ್ಡವರಲ್ಲಾದರೆ ಸಿಗರೇಟು ಡಬ್ಬಿ ಬರುತ್ತವೆ. ಯೆ
ಣಿಸಬೇಕಾದರೆ ಅದಷ್ಟು ಹೆಚ್ಚು ಕ್ರಯ
ಡಬ್ಬಿ ತರಬೇಕು. ಧರ್ಮಕ್ಕೆ ದೊರೆ
ವಿಲ್ಲದವನಿಗೂ ಸೇದಿ ಬಿಡಬೇಕೆಂ
ಹೋಟೆಲುಗಳಲ್ಲಿ ಬೀಡಿ-ಸಿಗರೇಟಿನವರಿಗ
ನಂದಾದೀಪವೇ ಉರಿಯುತ್ತದೆ. ಬೀಡಿ-ಸಿ.
ಅಭ್ಯಾಸವು ಈಗ ಬಹಳ ರಭಸದಿಂದ ಹಬ್ಬು
ಇದನ್ನು ತಡೆಗಟ್ಟುವುದು ಯಾರಿಂದಲೂ ಸಾಧ್ಯವಿಲ್ಲ: ದಿನ ದಿನಕ್ಕೆ ನಮ್ಮಲ್ಲಿ ಬೀಡಿಯ ಕಂಪೆನಿಗಳು ಹೆಚ್ಚುತ್ತಿವೆ. ನಮ್ಮ ಜಿಲ್ಲೆಯಲ್ಲಿ ಸಾವಿರಾರು ಜನರು ಬೀಡಿ ಕಟ್ಟುವ ಉದ್ಯೋಗದಿಂದಲೇ ಜೀವಿಸುವವರಿದ್ದಾರೆ. ಹೆಂಡದ ಅಂಗಡಿಗಳಂತೆಯೇ ಸರಕಾರದವರು ಈ ಬೀಡಿಯ

ವ್ಯಾಪಾರವನ್ನು ನಿಲ್ಲಿಸಿದರೆ ಮಾತ್ರ ನಮ್ಮ ಜನರು ಈ ಅನಾಹುತದಿಂದ ಪಾರಾಗಬಹುದೇ ವಿನಾ ಬೇರೆ ಯಾವ ದಾರಿಯೂ ಇಲ್ಲ.

ಖರ್ಚಿನ ವಟ್ಟಿಗೂ ಬೀಡಿ ಎಳೆಯುವವನು ನಶ್ಯ ಸೇದುವವನಿಗಿಂತ ನಾಲ್ಕು ಪಾಲು ಹೆಚ್ಚು ಖರ್ಚು ಮಾಡುತ್ತಾನೆ. ಸಿಗರೇಟು ಸೇದುವವನೆಂತೂ ಮನೆ ಇಟ್ಟುಕೊಳ್ಳುವವನೇ ಅಲ್ಲ. ದಿನಕ್ಕೆ ನಾಲ್ಕಾಣೆ ಎಂಟಾಣೆ ಒಂದು ರೂಪಾಯಿಯ ವರೆಗೂ ಹಣವನ್ನು ಸುಟ್ಟು ಬೂದಿ ಮಾಡುವ ಪುಣ್ಯಾತ್ಮರಿದ್ದಾರೆ. ತಿಂಗಳಿಗೆ ಐವತ್ತು ರೂಪಾಯಿ ಸಂಬಳವಿರುವವನು ಹತ್ತು ರೂಪಾಯಿಯ ಸಿಗರೇಟು ಸೇದುವುದೂ ಉಂಟು. ಮನೆಯ ಹೆಂಗಸು ಅರ್ಧಾಣೆಯ ಮಲ್ಲಿಗೆ ಹೂ ತೆಗೆದು ಕೊಂಡರೆ ಮನೆ ಉಳಿಯುವುದು ಹೇಗೆಂದು ಗಾಬರಿಯಾಗುವವನು ದಿನಕ್ಕೆ ನಾಲ್ಕಾಣೆಯ ಸಿಗರೇಟು ಸೇದುವುದಾದರೆ ಅವನನ್ನು ಏನು ಮಾಡಬೇಕು? ಸಿಗರೇಟಿಗಾಗಿ ನಮ್ಮ ದೇಶದಿಂದ ಪರದೇಶಗಳಿಗೆ ಹೋಗುವ ಹಣಕ್ಕೆ ಗಡಿಮಿತ ವಿದೆಯೇ? ಶುದ್ಧ ಖಾದಿಯನ್ನು ಧರಿಸಿಕೊಂಡು ಪರದೇಶಿ ಸಿಗರೇಟನ್ನು ಸೇದುತ್ತಿರುವವರು ನಮ್ಮಲ್ಲಿ ಅನೇಕರಿದ್ದಾರೆ. 'ನೀವೇಕೆ ಹೀಗೆ ಮಾಡುತ್ತೀರೆಂ'ದು ಪ್ರಶ್ನಿಸಿದರೆ ತಾವು ಮಹಾ ರಸಿಕರೆಂದೆಣಿಸಿಕೊಂಡು ಎಳ್ಳಷ್ಟೂ ನಾಚಿಕೆಯಿಲ್ಲದೆ 'ಪರದೇಶೀ ಸಾಮಾನುಗಳನ್ನು ಸುಡುತ್ತಿದ್ದೇವೆ'ಂದು ಹೇಳಿ ನೆಗಾಡುತ್ತಾರೆ. ಹೀಗಾಗಿ ಸಿಗರೇಟಿನ ದುರಾಭ್ಯಾಸ ಹಿಡಿದವನನ್ನು ನಾವು ಕೆಲವು ವೇಳೆ ನಿರಾಶೆಯಿಂದ ಕಾಣಬೇಕಾಗುತ್ತದೆ.

ಬೀಡಿ-ಸಿಗರೇಟಿನ ದುರಭ್ಯಾಸವು ಅಸಹ್ಯಕರ ಮತ್ತು ಮಗು. . . . ಇಷ್ಟುಮಾತ್ರವೇ ಅಲ್ಲ. ಆರೋಗ್ಯದೃಷ್ಟಿ ಹಳ ಕೆಡುಕೆಂದು ಎಲ್ಲರೂ ಒಪ್ಪುತ್ತಾರೆ. ಸಿಗರೇಟು ಸೇದುವವನು ಕ್ರಮೇಣ …ತ್ತಾಗುವ ಸಂಭವವಿದೆಯೆಂದು .ಪ್ರಿಯ. ಬೀಡಿ-ಸಿಗರೇಟು ಸೇದುವವನಿಗೆ ದುರಭ್ಯಾಸವಿದೆ. ಜೀರ್ಣಕ್ಕೆ ಅತ್ಯಂತ ಉಪಕಾರಿಯಾದ ಬಾಯಿಯಲ್ಲಿರುವ ದ್ರವ ಪದಾರ್ಥವನ್ನು ಯಾವಾಗಲೂ ಉಗುಳುತ್ತಿದ್ದರೆ ಅಜೀರ್ಣತೆಯೂ ಮಲಬದ್ಧತೆಯೂ ಉಂಟಾಗಿ ಅನೇಕ ರೋಗಗಳು ಉತ್ಪನ್ನವಾಗುತ್ತವೆ. ಆದುದರಿಂದಲೇ 'ಉಗುಳಿ ಉಗುಳಿ ರೋಗ' ಎಂಬ ಗಾದೆಯುಂಟಾಗಿದೆ. ಆದುದರಿಂದ ಪ್ರಿಯ ವಾಚಕನೇ ನೀನು ಎಂದಿಗೂ ಬೀಡಿ-ಸಿಗರೇಟಿನ ವ್ಯಾಪಾರಕ್ಕೆ ಹೋಗ ಬೇಡ. ದಾನ ಕೊಟ್ಟರೂ ನೀನು ಸ್ವೀಕರಿಸಬೇಡ. ಬೀಡಿ ಸೇದದವರು ಬೀಡಿ ಸೇದುವವರನ್ನು ಎಷ್ಟು ತುಚ್ಛೀಕಾರ ಬುದ್ಧಿಯಿಂದ ನೋಡುತ್ತಿರುವರೆಂದು ನಿನಗೆ ಗೊತ್ತಿದೆಯೇ? ಬೀಡಿ-ಸಿಗರೇಟು ಸೇದುವವನ ಹೆಂಡತಿಯು ಎಷ್ಟು ಕಷ್ಟದಿಂದ ಗಂಡನನ್ನು ಸಹಿಸುತ್ತಿರುವಳೆಂದು ನಿನಗೆ ಗೊತ್ತಿದೆಯೇ? ಸುಖ ಸಂತೋಷದಿಂದ ಆರೋಗ್ಯವಂತನಾಗಿ ಬಾಳಬೇಕೆಂದು ನೀನು ಇಚ್ಛಿಸುವಿಯಾದರೆ ಆ ದುರಭ್ಯಾಸಕ್ಕೆ ಕೈ ಹಚ್ಚಬೇಡ. ಒಂದು ವೇಳೆ ನೀನು ಅದರ ಬಂಧನದಲ್ಲಿದ್ದರೆ ಅದರಿಂದ ತಪ್ಪಿಸಿಕೊಳ್ಳಲಿಕ್ಕೆ ಪ್ರಯತ್ನಿಸು. ಹೊರಗೆ ಬರುವುದು ಕಷ್ಟವಿರಬಹುದು. ಆದುದರಿಂದಲೇ ನೀನು ಪ್ರಯತ್ನಿಸಬೇಕೆಂದು ಹೇಳಿದೆ. ಜೈಲಿನಲ್ಲಿದ್ದು ಹಿಂದೆ ಬಂದವರ ಕೂಡೆ ಬೀಡಿ-ಸಿಗರೇಟು ಬಿಟ್ಟು ಬದುಕಲು ಸಾಧ್ಯವಿಲ್ಲವೇ? ಎಂದು ಕೇಳು. ನೀನು ಎಷ್ಟುಮಾತ್ರಕ್ಕೂ ಆ ಬಲೆಯಿಂದ ಹೊರಗೆ ಬಾರದವನಾದರೆ ಇತರರನ್ನು ಆ ಕಡೆ ಎಳೆಯಲೆತ್ನಿಸಬೇಡ ಇತರರಿಗೆ ನೀನು ಬೀಡಿ-ಸಿಗರೇಟಿನ ದಾನ ಮಾಡಬೇಡ ನೀನು ಹೇಗೂ ಕೆಟ್ಟಾಯಿತು, ಇತರರನ್ನೂ ಕೆಡಿಸುವುದು ಸರಿಯೇ? 'ತಾನು ಕೆಟ್ಟೆ ಇತರರು ಯಾರೂ ಕೆಡಬೇಡಿರಿ' ಎಂದು ಬೋಧಿಸುವುದು ನಿನ್ನ ಕರ್ತವ್ಯವಲ್ಲವೇ?

ನೀನು ಬೀಡಿ-ಸಿಗರೇಟನ್ನು ಸದಾ ಸೇದುತ್ತಿರುವವನಾದರೆ ನನ್ನ ಈ ಮಾತುಗಳಿಗಾಗಿ ಸಿಟ್ಟು ಮಾಡಬೇಡ. ನಿಷ್ಠುರವಾದೀತೆಂದು ಯೋಚಿಸಿ ಈ ವರೆಗೆ ಯಾರೂ ಇಷ್ಟು ಸ್ಪಷ್ಟವಾಗಿ ಈ ವಿಚಾರದಲ್ಲಿ ನಿನ್ನ ಕೂಡೆ ಹೇಳದಿರಬಹುದು. ನಿನ್ನ ಗೆಳೆಯನಾದುದರಿಂದ ನಾನು ಈಗ ಹೇಳಿದೆ. ವಿಚಾರಿಸು—

ಅಂತರಂಗದ ವಾಚಕರಿಗೆ ಹೀಗೆ ಬರೆದುದರಿಂದ ಸಿಟ್ಟು ಇಲ್ಲವೆಂತಾದರೆ ಇನ್ನು ಮುಂದೆಯೂ ಇದೇ ಪ್ರಕಾರ ಬರೆಯಬೇಕೆಂದಿದ್ದೇನೆ. ಬರುವ ಸಲ ಬೀಡದ ವಿಷಯ.

ಇತಿ

ನಿನ್ನ ಗೆಳೆಯ

# ಅಸ್ತಿಪಂಜರದ ಎಲುಬುಗಳನ್ನು ಜೋಡಿಸಿದ ಕ್ರಮ (Joints)

ಬರೆದವರು:- **ಶ್ರೀ. ಯನ್. ಶ್ರೀಪಾದ ರಾವ್,** ಎಲ್. ಎಂ. ಪಿ.

ಮದ್ರಾಸ್ ಸರಕಾರದ ೧೯೧೦ರ ಸ್ವರ್ಣ ಪದಕದಾರರು.

ಅಸ್ತಿಪಂಜರದ ಎಲುಬುಗಳ ವಿಷಯ ಬಹಳ ಸಂಕ್ಷೇಪವಲ್ಲಿ ತಿಳಿಸಿದ್ದಾಯಿತು. ಈಗ ಈ ಎಲುಬುಗಳನ್ನು ಒಂದಕ್ಕೊಂದು ಜೋಡಿಸಿ ಕೈ ಕಾಲುಗಳು ಅಲ್ಲಾಡಿಸಿ ಕೆಲಸಮಾಡುವಂತೆಯೂ ತಲೆಯನ್ನು ಮತ್ತು ಬೆನ್ನನ್ನು ಬೇಕಾದಹಾಗೆ ಸ್ವಲ್ಪಮಟ್ಟಿಗೆ ಅತ್ತಿತ್ತ, ಹಿಂದೆ, ಮುಂದೆ, ಆಡಿಸಲು ಅನುಕೂಲವಾಗುವಹಾಗೆಯೂ ಬಹಳ ಗಟ್ಟಿಯಾಗಿಯೂ, ಸರ್ವಸಾಧಾರಣವಾಗಿ ಗಂಟು ತಪ್ಪಿಹೋಗದಂತೆ ಹಗ್ಗಗಳನ್ನು (Ligaments) ಗಂಟಿನಮೇಲೆ ಮತ್ತು ಕೆಳಗಿರುವ ಎಲುಬುಗಳಿಗೆ ಕೂಡಿಸಿ ಕಟ್ಟಿದಂತೆಯೂ ಜೋಡಿಸಿದೆ. ಮತ್ತು ಇಡೀ ಗಂಟು ಒಂದು ಚೀಲದಲ್ಲಿ (Capsule) ಟೋಪಿಯಂತೆ ಮೇಲೆ ಮತ್ತು ಕೆಳಗಿರುವ ಎಲುಬುಗಳಿಗೆ ಸುತ್ತಿಕೊಂಡಿದೆ. ಈ ಚೀಲದಲ್ಲಿ, ಗಂಟುಗಳು ಅಲ್ಲಾಡಲು ಅನುಕೂಲವಾಗುವಂತೆ ಒಂದು ತರದ ತೆಳ್ಳಗಿರುವ ಎಣ್ಣೆಯು (Synsvial fluid) ಉಂಟಾಗುತ್ತದೆ. ಗಂಟುಗಳಿಗೆ ಪೆಟ್ಟು ತಾಗಿದರೆ ಆ ಗಂಟು ಬಾತುಹೋಗುವದು ಎಲ್ಲರಿಗೂ ತಿಳಿದ ವಿಷಯ. ಹೀಗೆ ಗಂಟು ಬಾತುಕೊಳ್ಳುವದು ಈ ಎಣ್ಣೆ ಹೆಚ್ಚುವದರಿಂದಲೇ ಎಂಬುದನ್ನು ತಿಳಿಯತಕ್ಕದ್ದು. ಗಂಟುಗಳ ಮೂಲಕ ಕೈಕಾಲು ವಗೈರೆ ಅಲ್ಲಾಡಿಸಲಿಕ್ಕೆ ಅನುಕೂಲವಾಗುವಂತೆ ಆಯಾಯ ಗಂಟುಗಳಿಗೆ ಸೇರಿರುವ ಎಲುಬುಗಳು ತಕ್ಕ ಆಕಾರದಲ್ಲಿವೆ. ಇದರಲ್ಲಿ ಮುಖ್ಯವಾಗಿ ಭುಜದ (Shoulder) ಮತ್ತು ರೆಂಡಿನ (Hip) ಗಂಟುಗಳು (Ball and socket) ಚೆಂಡನ್ನು ಹೊಂಡದಲ್ಲಿ ಸೇರಿಸಿದ ರೀತಿಯಲ್ಲಿ ಎಲ್ಲಾ ಕಡೆಗೂ ತಿರುಗಿಸಲಿಕ್ಕೆ ಅನುಕೂಲವಾಗಿವೆ. ಮೊಣಕಾಲು ಮತ್ತು ನಡುಕೈಗಂಟುಗಳು (Hinge joints) ಬಿಜಾಕ್ರಿಯಂತಿವೆ ಎನ್ನಬಹುದು. ಎದೆಯ ಎಲುಬುಗಳ (Ribs) ೧೨ ಜೊತೆ ಹಿಂದಿನ ಬಿದಿರು ಎಲುಬುಗಳಿಗೆ ಸೇರಿ (Backbone) ಮುಂಡಕ್ಕೆ ರಂಪು ಎಲುಬಿಗೆ (Breast-bone) ಬಂದು ಸೇರುವಾಗ ಗಾಳಿಹಾಕುವ ಕೊಳವೆಯೋಪಾದಿಯಲ್ಲಿ (Bellows) ಆಕಾರವಿರುವ ಹೃದಯ(Thorax) ವುಂಟು ಈ ಹೃದಯದಲ್ಲಿ ಶ್ವಾಸಕೋಶ (Lungs) ಗಳೂ ರಕ್ತವನ್ನು ಚಲಾವಣೆಮಾಡುವ ಪಂಪಿನಂತಹ ಗುಂಡಿಯೂ (Heart) ಇವೆ ಈ ಗುಂಡಿಯಿಂದ ದೊಡ್ಡ ನಳಿಗೆಯಂತಹ ರಕ್ತನಾಳಗಳು ಹೊರಡುತ್ತವೆ. ಶ್ವಾಸಕೋಶಗಳಿಗೆ ಕೂಡಾ ವಾಯುವನ್ನು ಹೊರಗೆ ಒಳಗೆ (ನಾವು ಘ್ರಾಣಿಸಿದಂತೆ) ಬಿಡಲಿಕ್ಕೆ ನಳಿಗೆಗಳಿವೆ. (Bronchi) ಈ ದೊಡ್ಡ ದೊಡ್ಡ ರಕ್ತಚಲಾವಣೆಯ ಮತ್ತು ವಾಯುಚಲಾವಣೆಯ ನಳಿಗೆಗಳು ಹೃದಯದ ಒಳಗೆ ಇವೆ. ಇದಲ್ಲದೆ ಆಹಾರದ ನಳಿಗೆ ಕೂಡಾ ಇದೆ. (Oesophagus or gullet) ಮೇಲೆ ಹೇಳಿದ ಗುಂಡಿ, ಶ್ವಾಸಕೋಶಗಳು ಮತ್ತು ಇವುಗಳ ದೊಡ್ಡ ನಳಿಗೆಗಳಲ್ಲದೆ ಈ ಹೃದಯವು, ಹೊಟ್ಟೆಯಲ್ಲಿ ಇರುವ (Abdomen) ಮುಖ್ಯವಾದ ಕಲಿಜ, (Liver) ಆಹಾರಕೋಶ (Stomach) ರಕ್ತಕೋಶ (Spleen) ಮೂತ್ರಕೋಶ (Kidneys ಎಂಬ ಅವಯವಗಳಿಗೆ (Organs) ಆಶ್ರಯ ಕೊಟ್ಟಿರುತ್ತದೆ.



ದೇಹದಲ್ಲೆಲ್ಲಾ ಕೂಸಿನ ತಲೆಯೇ ದೊಡ್ಡದಾಗಿದ್ದು ಬಾಣಂತಿಯಾಗುವಾಗ ಹೆರುವ ಸಮಯ ಕಷ್ಟಕೊಡು ವದರಿಂದ ತಲೆಯ ಎಲುಬುಗಳು ಮೃದುವಾಗಿರುತ್ತವೆ. ಮತ್ತು ತಲೆಯೊಳಗಿನ ಮೆದುಳು ದೇಹಕ್ಕೆಲ್ಲಾ ಪ್ರಧಾನ ವಾಗಿರುವುದರಿಂದ ತಲೆಗೆ ಹೊರಗಿನಿಂದ ಹೊಡೆದ ಪೆಟ್ಟು ಸಾಧಾರಣವಾಗಿ ಮೆದುಳಿಗೆ ಬಾಧಿಸದಂತೆ ಈ ಎಲುಬುಗಳು ಒಂದಕ್ಕೊಂದು ನೇಯಿಗೆಯಂತೆ (Sutures) ಸೇರಿಕೊಂಡಿವೆ. ತಲೆಬುರ್ಡೆಯೊಳಗಿನ ಮೆದುಳಿನಿಂದ ೧೨ ಜತೆನರಗಳು ಹೊರಡುತ್ತವೆ.

ಬೆನ್ನಿನ ಬಿದಿರು ಎಲುಬುಗಳು (Vertebrae) ಒಂದರ ಮೇಲೊಂದು ಇಡಲ್ಪಟ್ಟಿವೆ. ಪ್ರತಿ ಒಂದು ಎಲುಬಿಗೂ (Vertebra) ನಡುವಿನಲ್ಲಿ ಒಂದು ತೂತಿದೆ. ಮತ್ತು ಹಿಂದೆ, ಎಡ, ಬಲ ಪಕ್ಕದಲ್ಲಿ ಸಪೂರ ವಾದ ಗೆಲ್ಲಿನಂತಹ ಎಲುಬುಗಳಿವೆ (Spinal-processes) ಪ್ರತಿ ಎರಡು ಎಲುಬುಗಳ ನಡುವಿನಲ್ಲಿ ದಪ್ಪವಾದ ಚರ್ಮದ ವಾಶರಿನಂತಹ (Cartillage) ತುಂಡು ಉಂಟು. ಈ ಬೆನ್ನೆಲುಬು ಗೆಲ್ಲುಗಳನ್ನು ಒಂದಕ್ಕೊಂದು ಹಗ್ಗಗಳಿಂದ (Lgaments) ಕೂಡಿಸಿವೆ. ಈ ಬೆನ್ನೆಲುಬಿನ ತೂತಿನಲ್ಲಿ ನರಗಳ ಹಗ್ಗವು ಇದೆ. (Spinal cord) ಮತ್ತು ಇದರಿಂದ ಜತೆಯಾಗಿ ನರಗಳು ಎಡ ಬಲ ಪಾರ್ಶ್ವಗಳಿಗೆ ಹೊರಡುತ್ತವೆ.

ತಲೆಯ ಬುರ್ಡೆಯು ಕುತ್ತಿಗೆಯ ಪ್ರಥಮ ಎಲುಬಿನ ಮೇಲೆ ಇದೆ. ಇದಕ್ಕೆ (Atlas) ಎಂದು ಹೇಳುತ್ತಾರೆ. (Atlas) ಅಂದರೆ ಶಾಲೆಯ ಮಕ್ಕಳು ತಮ್ಮ ಭೂಗೋಲದ ನಕ್ಷೆಗಳಿರುವ ಪುಸ್ತಕಕ್ಕೆ ಹೇಳುತ್ತಾರೆ. ಮಾನವನ ತಲೆಯು ಕೂಡಾ ಭೂಗೋಲದ ಆಕಾರದಲ್ಲಿಯೇ ಇದೆ ಅನ್ನಬಹುದು. ಮಾತ್ರವಲ್ಲಾ, ಮೆದುಳಿನ ಸಾಮರ್ಥ್ಯದಿಂದ ಮಾನವನ ಸೃಷ್ಟಿಯನ್ನು ಮತ್ತು ಸೃಷ್ಟಿಯ ಕ್ರಮವನ್ನು ಅಂದರೆ ಭೂಗೋಲ ಶಾಸ್ತ್ರವನ್ನು ತಿಳಿಯ ಬಹುದು. ಈ ಕುತ್ತಿಗೆಯ ಪ್ರಥಮ ಎಲುಬು (Atlas) ಎಂಬದು ಒಂದು ಉಂಗುರದಂತೆ ಉರುಟು ಇದೆ. ಅದು ಕುತ್ತಿಗೆಯ ಎರಡನೆ (Axis) ಎಂಬ ಗುಂಟದಂಥಾ ಎಲುಬಿನಮೇಲೆ ತಿರುಗುತ್ತದೆ. ಆದ್ದರಿಂದ ನಮಗೆ ಬೇಕಾದಂತೆ ನೋಡಲಿಕ್ಕೆ ತಲೆಯನ್ನು ಮೇಲೆ, ಕೆಳಗೆ, ಎಡ, ಬಲ ದಿಕ್ಕಿಗೆ ತಿರುಗಿಸ ಬಹುದಾಗಿದೆ. ಇಲ್ಲಿಂದ ತಲೆಮೆದುಳಿನಿಂದ ಹೊರಡುವ ಹನ್ನೆರಡು ಜತೆನರಗಳಲ್ಲದೆ ಉಳಿದ ಪೂರಾ ಮೆದುಳಿನ ನರಗಳಂಶವು ಹಗ್ಗದೋಪಾದಿ (Spinal cord) ಸುರು ಆಗುತ್ತದೆ. ಕೊಲೆಪಾತಕ ಮಾಡಿದವರನ್ನು ಪಾಶಿ ಅಥವಾ ಗಲ್ಲಕ್ಕೆ ಹಾಕಿ ಕೊಲ್ಲುವ ಕಠಿಣ ಶಿಕ್ಷೆ (Death by hanging)ಯಲ್ಲಿ ಈ (Axis) ಎಂಬ ಎಲುಬಿನ ಗೂಟ ತುಂಡಾದ ತಕ್ಷಣ ಮರಣ ಸಂಭವಿಸುತ್ತದೆ. (Instantanious death)

---

# ಹೀಗೂ ಹೇಳಬಹುದೇ?

● ಬರೆದವರು: ಎ. ಟಿ. ಉಪಾಧ್ಯಾಯ. ●

ನನಗೆ ನನ್ನ ವೆಂಕ್ಟು ಮಾವನ ದೇಹದ ಅನಾರೋಗ್ಯದ್ದೇ ಚಿಂತೆ! ಇನ್ನು ಹೀಗೇ ಬಿಟ್ಟರೆ ಚಾಪೆ ಹಿಡಿಯದೆ, ಬಿಡಲಿಕ್ಕಿಲ್ಲೆಂದು ತೋರಿತು! ಚಾಪೆ ಹಿಡಿದ ಮೇಲೆ ಕಷ್ಟಪಡುವುದಕ್ಕಿಂತ, ಚಾಪೆ ಹಿಡಿಯುವ ಮೊದಲೇ ಔಷಧಿ ಮಾಡಿಸುವುದೊಳ್ಳೇದೆಂದೆಣಿಸಿತು.

ನಮ್ಮಲ್ಲಿಯ ಪ್ರಸಿದ್ಧ ಡಾಕ್ಟರರಲ್ಲಿಗೆ ಕರಕೊಂಡು ಹೋದೆ. ಡಾಕ್ಟರರು ಪರೀಕ್ಷೆ ಮಾಡಿದರು. ‘‘ಇದು ‘ಒಡಲ’ ಕಾಹಿಲೆ. ಇದಕ್ಕೆ ಔಷಧಿ ಇಲ್ಲ. ಏನಾದರೂ ಟಾನಿಕ್ ತೆಗೆದುಕೊಳ್ಳಬಹುದು. ಅದೂ ಪ್ರಯೋಜನವಿಲ್ಲೆ”ಂದು ನನ್ನನ್ನು ಆಚೆಗೆ ಕರೆದು ಹೇಳಿದರು. ಅಂದಿನಿಂದ ರಾತ್ರಿ ನನಗೆ ನಿದ್ದೆ ಹತ್ತದು. ಇನ್ನೇನು ಮಾಡುವುದೆಂದೇ ನನ್ನ ಆಲೋಚನೆ.

ನಾಲ್ಕೈದು ದಿವಸಗಳ ನಂತರ ಒಂದು ಆಲೋಚನೆ ಹೊಳೆಯಿತು. ದೊಡ್ಡ ದೊಡ್ಡ ಅಕ್ಷರಗಳಲ್ಲಿ‘‘. . . ಕಂಪೆನಿಯಿಂದ ಜಿಲ್ಲೆಯ ಅಧಿಕಾರ ಪಡೆದ. . . . ಏಜಂಟರಿಂದ ನಿಮ್ಮ ವಿಮೆಯನ್ನು ಮಾಡಿಸಿರಿ!” ಎಂಬ ವಾಲ್‌ಪೋಸ್ಟರ್ಸ್‌ನ ನೆನಪಾಯಿತು. ಬದುಕುವುದು ಕಷ್ಟ. ಆದ್ದರಿಂದ.... ಸಾವಿರಕ್ಕೆ ಇನ್ಶೂರ್ ಮಾಡಿಸಿಬಿಡುವುದು, ಒಂದು ವೇಳೆ ಬದುಕಿದರೆ ಅವರಿಗಾಯಿತು. . . .ತ್ರಿ ಇದ್ದವರಿಗೆ ಸುಖವಾಯಿತೆಂದುಕೊಂಡೆ.’

ಅದೇ ದಿವಸ ಒಬ್ಬ ಏಜಂಟರನ್ನು ಕಂಡು ಮಾತಾಡಿಸಿದೆ. ‘‘ಹಾಗಾದರೆ ನಿಮ್ಮ ಮಾವನನ್ನು ಕರಕೊಂಡು ನಾಳೆ ನಮ್ಮ ಆಫೀಸಿಗೆ ಬನ್ನಿ. ಡಾಕ್ಟರರನ್ನು ಇಲ್ಲಿಗೇ ಬರುವಂತೆ ಹೇಳುವೆನು. ಮಾತ್ರ ಡಾಕ್ಟರ್ ಬಂದು ವಾಪಸ್ ಹೋಗುವಂತೆ ಮಾಡಬೇಡಿ’’ ಎಂದರು ಏಜಂಟರು. ಅಲ್ಲಿಂದ ಹೊರಟು ಮನೆಗೆ ಬಂದೆ. ರಾತ್ರಿ ಇಡೀ ಎಷ್ಟು ಹೊತ್ತಿಗೆ ಬೆಳಗಾದೀತೆಂದೇ ನನ್ನ ಮನಸ್ಸಿನಲ್ಲಿ ತಿರುಗುತ್ತಿತ್ತು.

ಡಾಕ್ಟರ್ ನಮಗಿಂತ ಮುಂಚೆಯೇ ಬಂದು ಕಾದಿದ್ದರು! ಪರೀಕ್ಷೆ ಮಾಡಿದರು. ಆ ಮೇಲೆ ಎತ್ತರವನ್ನು ಅಳೆದರು. ವೇಯಿಂಗ್ ಮೆಶಿನಿನಲ್ಲಿ ನಿಲ್ಲಿಸಿ, ಚೆನ್ನಾಗಿ ಬಗ್ಗಿ ನೋಡಿ ‘ಸಾಕಷ್ಟು ಭಾರವಿಲ್ಲದ ಕಾರಣ ಇವರನ್ನು ಇನ್ಶೂರ್ ಮಾಡಲಿಕ್ಕಾಗುವುದಿಲ್ಲೆ’ಂದರು. ನನ್ನ ಆ ಪ್ರಯತ್ನವು ನಿಷ್ಫಲವಾಯಿತು.

ಅದೊಂದು ದಿನ ‘ಸಂಸಾರ ನೌಕ’ ಚಿತ್ರವು ಪ್ರದರ್ಶಿಸಲ್ಪಟ್ಟಿತ್ತು. ನಾನೂ ಮಾವನೂ ನೋಡುವುದಕ್ಕೆ ಹೋದೆವು. ಮಾವ ಯಾವುದಕ್ಕಾದರೂ ತಪ್ಪು ಹುಡುಕದೇ ಇಲ್ಲ. ಇದು ಅವರ ಸ್ವಭಾವ. ರಾತ್ರಿ ಜಾಸ್ತಿಯಾದ್ದರಿಂದ ಅವರ ಮಾತಿಗೆ ಕಿವಿಗೊಡಲೇ ಇಲ್ಲ. ಮನೆಗೆ ಬಂದು ಚಾಪೆ ಬಿಡಿಸಿ ಮಲಗಿದೆ. ರಾತ್ರಿ ಎಷ್ಟೇ ಆಗಲಿ ಓದದೆ ಮಲಗುವ ಅಭ್ಯಾಸ ಅವರಿಗಿದ್ದಿಲ್ಲ. ಏನೊ ಓದುತ್ತಿದ್ದರು. ನಾನೂ ಮಾತಾಡಲಿಲ್ಲ. ನನಗೊಂದು ನಿದ್ರೆಯಾಗಿ ಎಚ್ಚರಾಯಿತು; ಅವರು ಅದೇ ಕೆಲಸದಲ್ಲಿದ್ದರು.

ಮೆಲ್ಲನೆ ಚಾಪೆಯಿಂದೆದ್ದು ಅವರ ಹಿಂದಿನಿಂದ ನಿಂತು ನೋಡಿದೆ. ಅದೊಂದು ಕತೆ, ಅವರ ಹೆಸರು ಮಾತ್ರ ನೋಡಿಕೊಂಡೆ. ಹಾಗೆಯೇ ಬಂದು ಮಲಗಿದೆ.

ಮಾರಣೆಯ ದಿನ ಆ ಕತೆಯನ್ನು ತೆಗೆದು ನೋಡಿದೆ. ಕತೆಯ ಹೆಸರು ‘Rust’ ‘ತುಕ್ಕು’ ಮಹಾಕವಿಗಳಾದ ಮೋಪಸಾಂತರು ಬರೆದ ಕತೆ. ಕತೆಯು ಹೀಗಿತ್ತು:—

ಒಬ್ಬ ರಿಟಾಯರ್ಡ್ ಸೋಲ್ಜರನು, ತನ್ನ ಪಟ್ಟಣವಾಸವನ್ನು ಬಿಟ್ಟು ತನ್ನ ಸಂಗಾತಿಯೊಡನೆ ಸಮೀಪವಿರುವ ಒಂದು ಹಳ್ಳಿಯಲ್ಲಿ ವಾಸಿಸಹತ್ತಿದನು. ಆತನ ದಿನ ನಿತ್ಯದ ಕೆಲಸವೆಂದರೆ ಎಲ್ಲಾದರೂ ಬೇಟೆಯಾಡುವುದು, ಕ್ರೂರ ಪ್ರಾಣಿಗಳು ಸಿಕ್ಕಿದರೆ ಕೊಲ್ಲುವುದು, ಆಹಾರಕ್ಕಾಗುವ ಪ್ರಾಣಿಗಳು ಸಿಕ್ಕಿದರೆ ಮನೆಗೆ ತರುವುದು, ಇಷ್ಟೇ.

ಸೋಲ್ಜರನಾದ್ದರಿಂದ ಮದುವೆ ಮಾಡಿಕೊಳ್ಳಲಿಲ್ಲ ಮದುವೆ ಎಂಬುದರ [illegible]ವೇ ಅವನಿಗಿದ್ದಿಲ್ಲ. ಆತನು ತನ್ನ ಹದಿನೆಂಟನೇ ವಯಸ್ಸಿನಲ್ಲಿ ಕೆಲಸಕ್ಕೆ ಸೇರಿದ್ದ. ಚಿಕ್ಕಂದಿನಲ್ಲಿಯೇ ತಂದೆ ತಾಯಿಗಳು ಮಡಿದಿದ್ದರು. ಹೀಗೆಯೇ ತನ್ನ ನಲ್ವತ್ತೆಂಟು ವರುಷಗಳ ಪ್ರಾಯಗಳನ್ನು ಬ್ರಹ್ಮಚರ್ಯದಲ್ಲೇ ಕಳೆದಿದ್ದನು. ಒಂದು ದಿನ ಆತನ ಸಂಗಾತಿಯು ‘ನೀನು ಇನ್ನಾದರೊಂದು ಮದುವೆ ಮಾಡಿಕೊಳ್ಳಬೇಕು, ಏಕೆಂದರೆ ಮೊದಲಿನಂತೆ ಕೆಲಸವಿಲ್ಲ. ಹೇಗೂ ರಿಟಾಯರ್ಡ್ ಆಗಿರುವಿ’ ಎಂದನು.

ಆತನಿಗೆ ತನ್ನಲ್ಲಿಯೇ ಸಂಶಯ ಉಂಟಾಯಿತು. ‘ನಾನು ಇದು

ವರೆಗೂ ಸ್ತ್ರೀಯರ ವಿಷಯ ಏನೆಂಬುದನ್ನು ತಿಳಿದವನಲ್ಲ. ಮತ್ತು ಮದುವೆಯೆಂದರೆ ಆಟದ ಕೆಲಸವಲ್ಲ. ಫಾದರ್ ಇದಿರಿಗೆ ನಿಂತು ಸತ್ಯ ಪ್ರಮಾಣ ಮಾಡಿ, ಆಕೆಯ ಸುಖ ದುಃಖಗಳಲ್ಲಿ ಮತ್ತು ಸಂಸಾರದಲ್ಲಿ ಸರಿಯಾಗಿ ನಡೆದುಕೊಳ್ಳುತ್ತೇನೆಂದು ಪ್ರಮಾಣ ಮಾಡುವಂಥಾ ವಿಷಯ. ಇದಕ್ಕೆ ನಾನು ಥಕ್ಕನೆ ದುಮುಕಬಾರದು! ಇದನ್ನು ಚೆನ್ನಾಗಿ ಅಭ್ಯಾಸ ಮಾಡಿಕೊಂಡು ಈ ವಿಷಯಕ್ಕೆ ಕೈಹಾಕುವುದು ಒಳ್ಳೆಯದೆಂದು ತೋರಿತು. ಆತನು ತನ್ನ ಸಂಗಾತಿಯೊಡನೆ ಹತ್ತು ದಿನಗಳ ಪುರುಸೊತ್ತನ್ನು ಕೇಳಿಕೊಂಡು ಫ್ರಾನ್ಸಿಗೆ ಹೋಗಿ ಒಬ್ಬ ವೇಶ್ಯೆಗೆ ಹದಿನೆಂಟು ಫ್ರಾಂಕ್ ಕಂಟ್ರಾಕ್ಟ ಮಾಡಿ ಒಂದು ದಿವಸ ರಾತ್ರಿ ಅಲ್ಲಿಯೇ ಇದ್ದನು. ಆತನ ಮನಸ್ಸಿಗೆ ಸಮಾಧಾನವಾಗಲಿಲ್ಲ. ಅಲ್ಲಿಂದ ಹೊರಟು ಇನ್ನೊಬ್ಬ ಸುಪ್ರಸಿದ್ಧ ವೇಶ್ಯೆಯಲ್ಲಿಗೆ ಹೋಗಿ ಒಂದು ವಾರದ ಕಂಟ್ರಾಕ್ಟ ಮಾಡಿದ. ದಿವಸಗಳು ದಾಟಿದ್ದಷ್ಟೇ ಅಲ್ಲದೆ, ಆತನಿಂದ ಏನೂ ಮಾಡಲಿಕ್ಕಾಗಲಿಲ್ಲ. ಕಡೆಗೆ ಹತಾಶನಾಗಿ ಹಿಂತಿರುಗಿದ. ಮನೆಗೆ ಬಂದು ತನ್ನ ಸಂಗಾತಿಯೊಡನೆ ತಾನು ಫ್ರಾನ್ಸಿನಲ್ಲಿ ಹೋಗಿ ಪ್ರಯತ್ನಪಟ್ಟ ವಿಷಯವನ್ನು ತಿಳುಹಿಸಿ ನೀನು ಹೇಳಿದಂತೆ ಮದುವೆ ಮಾಡಿಕೊಳ್ಳುತ್ತಿದ್ದರೆ, ಫಾದರರ ಇದಿರು ಸತ್ಯ ಪ್ರಮಾಣ ಮಾಡಿ ಪಾಪಿಯಾಗುತ್ತಿದ್ದೆ! ಎಂದ." ಆ ಕತೆಯ ಸಾರಾಂಶವಿಷ್ಟೆ.

ಈ ಕತೆಯನ್ನು ಓದಿದ್ದೆ ನಂತರ ನಮ್ಮ ಮಾವನವರ ಅವಸ್ಥೆಯೂ ಒಂದು ತರದ ಸಂಶಯಕ್ಕೊಳಗಾಯಿತು. ಆ ಮೇಲೆ ಯಾವಾಗ ನೋಡಿದರೂ ನ್ಯೂಸ್ ಪೇಪರ್ ಹಿಡಕೊಂಡು ಅದರಲ್ಲಿಯ 'ಮೆಟ್ರಿಮೋನಿಯಲ್' ಕಲಂ ನೋಡುವುದೇ ಕೆಲಸ. ಇದರಿಂದಾಗಿ ಡಾಕ್ಟರ್ ಹೇಳಿದ 'ಒಡಲ ಕಾಹಿಲೆ' ಎಂದರೆ ಇದೇ ಇರಬಹುದೆಂದು ತಿಳಿಯಿತು! ಕಡೆಗೆ ನಾನೇ ಬಾಯಿ ಬಿಟ್ಟು 'ಮದುವೆ ಮಾಡಿಕೊಳ್ಳುವ ಆಶೆ ಇದೆಯೇ' ಎಂದು ಕೇಳಿದೆ. 'ಅಹುದು' ಎಂದು ಉತ್ತರ ಸಿಕ್ಕಿತು.



ಭಾರತೂಗುವ ಯಂತ್ರದಲ್ಲಿ ಮಾವನನ್ನು ನಿಲ್ಲಿಸಿ ಡಾಕ್ಟರರು ಭಾರನೋಡಿ, "ಸಾಕಷ್ಟು ಭಾರವಿಲ್ಲದ ಕಾರಣ ಇವರನ್ನು ಇನ್ಶೂರ್ ಮಾಡಲಿಕ್ಕಾಗುವುದಿಲ್ಲವೆಂದರು. ಏಜೆಂಟರು ತಬ್ಬಿಬ್ಬಾಗಿ ತಲೆಯ ಮೇಲೆ ಕೈಯ್ಯಿಟ್ಟು ವಿಧಿಯನ್ನು ಮೌನವಾಗಿಯೇ ದೂರಿದರು.

ಮತ್ತೇನು? ಮನೆಯಲ್ಲಿ ಬೇರೆ ಯಾರೂ ಗಂಡಸರಿಲ್ಲದ ಕಾರಣ ನಾನೇ ಮಾವನಿಗೆ ವಧುವಿನ ದಿಗ್ವಿಜಯಕ್ಕಾಗಿ ಹೊರಟೆ. 'ಏನು ರಾಜು? ಮಗಳನ್ನು ಬೇಗ ತಯಾರು ಮಾಡಿಕೊಡಲಿಕ್ಕೊ?' ಎಂದು ನನ್ನ ಮಿತ್ರರು ನನಗೆ ಹಾಸ್ಯ ಮಾಡಿದರು. ಮಾಡುವುದೇನು—ನಾನೂ ಹಾಸ್ಯ ಮಾಡುವುದೇ? ಆದರೆ ಅವರ ಹಾಸ್ಯವು ಮಿತಿಮೀರಿತು, ನನಗೆ ಸ್ವಲ್ಪ ಸಿಟ್ಟು ಬಂತು. ಆದರೂ ಅದನ್ನು ತೋರಿಸದೆ ನೆಗಾಡಿಕೊಂಡು, 'ಹುಡುಗಿ ಹುಡುಕುವುದು, ನನ್ನ ಮಾವನಿಗಲ್ಲದೆ ಬೇರಾರಿಗೂ ಅಲ್ಲವಲ್ಲ,' ಅಂದುಕೊಂಡು ಹೊರಟು ಹೋದೆ.

ಆದರೆ ನನ್ನ ಮನಸ್ಸಿನಲ್ಲಿ ಸ್ವಲ್ಪ ನಾಚಿಕೊಂಡೆ. ಯಾರಾದರೂ ಹುಡುಗಿ ಯಾರಿಗೆಂದು ಕೇಳಿದರೆ ಏನನ್ನು ಹೇಳುವುದೆಂದು ಆಲೋಚಿಸಿದೆ. ಕೊನೆಗೆ ಧೈರ್ಯ ಮಾಡಿಕೊಂಡೆ. ಯೋಚನೆಯಲ್ಲಿ ದಾರಿ ಸಾಗಿದ್ದೇ ತಿಳಿಯಲಿಲ್ಲ. ಬಿಸಿಲಿನ ದಾಹವು ಜಾಸ್ತಿಯಾದ್ದರಿಂದ ಹತ್ತಿರದ ಅಶ್ವತ್ಥದ ಕಟ್ಟೆಯಲ್ಲಿ ಕುಳಿತೆ.

ಆ ಹಾದಿಯಲ್ಲಿ ಒಬ್ಬ ಮುದುಕನು ಭಿಕ್ಷಾಟನೆಗೆ ಹೋಗಿದ್ದವನು ಬಂದು ಅದೇ ಕಟ್ಟೆಯಲ್ಲಿ ದಣುವಾರಿಸುವುದಕ್ಕೆ ಕುಳಿತ. ಅಷ್ಟರಲ್ಲಿ ನಾನು "ಅಯ್ಯಾ, 'ಹಿಂಗಾಲಿಗೆ' ಇನ್ನೆಷ್ಟು ದೂರವಿದೆ" ಎಂದು ವಿಚಾರಿಸಿದೆ? ಅದಕ್ಕವನು 'ಇನ್ನರ್ಧ ಮೈಲು ಕೂಡಾ ಇಲ್ಲ'ಎಂದ.

'ನಿನ್ನ ಮನೆ ಎಲ್ಲಿ' ಎಂದೆ?

'ನನ್ನ ಮನೆಯೂ ಅಲ್ಲೇ'

'ಹಾಗಾದರೆ ರಾಮ ಭಟ್ಟರ ಗುರ್ತಿದೆಯೇ?'

'ಅಹುದು. ಅವರ ಜಾಗದಲ್ಲಿಯೇ

ಸಾನೊಂದು ಗುಡಿಸಲು ಕಟ್ಟಿಕೊಂಡು ಇರುವುದು.'

'ಅವರಿಗೆ ಮಕ್ಕಳೆಷ್ಟು?'

'ನಾಲ್ಕು. ಎಲ್ಲಾ ಹೆಣ್ಣು ಮಕ್ಕಳೇ'

'ಮದುವೆಯಾಗಿದೆಯೇ?'

'ಇಬ್ಬರಿಗಾಗಿದೆ ಇನ್ನಿಬ್ಬರಿರುವರು.'

'ಎಷ್ಟು ಪ್ರಾಯದವರು?'

'ದೊಡ್ಡಮ್ಮನವರಿಗೆ ಹದಿನೆಂಟು ವರುಷ. ಚಿಕ್ಕಮ್ಮನವರಿಗೆ ಹದಿನಾರು.'

'ಅದೇನು ಮದುವೆಯಾಗಿಲ್ಲ? ರೂಪವತಿಯರಲ್ಲವೆ?'

'ಅವರ ಮಕ್ಕಳು ಒಬ್ಬರಿಂದೊಬ್ಬರು ಚೆಲುವೆಯರು.'

'ಜಾತಕವನ್ನು ಕೊಟ್ಟಾರೆ?'

'ಜಾತಕವನ್ನು ಕೊಡದೆ ಹುಟ್ಟಿದ ಹೆಮ್ಮಕ್ಕಳನ್ನು ಮನೆಯಲ್ಲಿಯೇ ಇಟ್ಟು ಕೊಳ್ಳುತ್ತಾರೆಯೇ? ಅದಿರಲಿ! ಹುಡುಗಿ ಯಾರಿಗೆ? ನಿಮಗೊ ಅಥವಾ ಬೇರೆಯವರಿಗೊ?' (ನನ್ನ ಮಿತ್ರರು ಕೇಳಿದಂತೆಯೇ ಕೇಳಿಬಿಟ್ಟ. ನನ್ನ ಕೆಲಸವಾಗಬೇಕಲ್ಲ! ಹೇಳದಿದ್ದರೆ ಉಪಾಯವಿಲ್ಲ) 'ನನಗಲ್ಲ, ನನ್ನ ಮಾವನಿಗೆ.' 'ಮಾವ ಎಂದರೆ ಸೋದರ ಮಾವನೇ?' ಎಂದು ಆವ ಕೇಳಿದ 'ಅಹುದು ಎಂದೆ.' ಆತನು ನಕ್ಕು ಬಿಟ್ಟ. ನನಗೆ ನಾಚಿಕೆ ಆಯಿತು. ಆದರೂ ಅದನ್ನು ತೋರಿಸಲಿಲ್ಲ, ಇಷ್ಟಾಗುವಾಗ ಘಂಟೆ ಮೂರಾಯಿತು. 'ಅಯ್ಯೊ ಬಿಸಿಲು ತಣೆಯಿತು. ಹೋಗೋಣವೇ'? ಇಬ್ಬರೂ ಹೊರಟೆವು.

ರಾಮಭಟ್ಟರ ಅಂಗಳದಲ್ಲಿ ತನ್ನನ್ನು ಬಿಟ್ಟ. ನಾನು ಮನೆಯೊಳಕ್ಕೆ ಹೋದೆ ರಾಮಭಟ್ಟರು ಚಾವಡಿಯಲ್ಲಿ ಕುಳಿತಿದ್ದರು. ನನ್ನನ್ನು ಕುಳಿತುಕೊಳ್ಳುವಂತೆ ಹೇಳಿದರು. ಮಗಳನ್ನು ಕರೆದು ಬೆಲ್ಲ ನೀರು ತರುವಂತೆಹೇಳಿದರು. ಬೆಲ್ಲ ನೀರು ತಂದು ಕೊಟ್ಟವಳೇ ಹಿರಿಯವಳೆಂದು ತೋರಿತು. ಅಷ್ಟರಲ್ಲಿ ಕಿರಿಯವಳು ಬಂದಳು. ಭಿಕ್ಷುಕನು ಹೇಳಿದ್ದು ನಿಜವೆಂದು ತೋರಿತು. ಭಟ್ಟರೊಡನೆ ಬಂದ ವಿಚಾರವನ್ನು ತಿಳಿಸಿದೆ. ಜಾತಕದ ನಕಲನ್ನು ಕೊಟ್ಟರು. ಬರುತ್ತೇನೆಂದುಹೊರಟೆ.

ಮನೆಗೆ ಬಂದು ನಡೆದ ವಿಷಯ ತಿಳಿಸಿದೆ, ಮತ್ತು ಜಾತಕದ ನಕಲನ್ನು ಕೊಟ್ಟೆ. ಮಾರಣೆಯ ದಿನ ಸಂಜೆ ತಿರುಗಾಡಲಿಕ್ಕೆ ಹೊರಟೆವು. ಎಲ್ಲಿಗೆ ಹೋಗುವುದೆಂದು ನಮ್ಮಲ್ಲಿಯೇ ಪ್ರಶ್ನೆ. ಅಷ್ಟರಲ್ಲಿ ಮಾವನವರು ನಮ್ಮ 'ಬ್ರಹ್ಮಚರ್ಯಾಶ್ರಮ'ಕ್ಕೆ ಎಂದರು. ಅಂದರೆ? ಅದೇ ಆ ಕಾನ್ವೆಂಟಿನ ಪಕ್ಕದ ಬಂಡೆಗೆ. ಆ ಬಂಡೆಗೆ ಆ ಹೆಸರಿಟ್ಟವರಾರು? ಇಡುವುದಾರು? ಕಾನ್ವೆಂಟಿನಲ್ಲಿರುವುದು'ಬ್ರಹ್ಮಚಾರಿಣಿ'ಯರು. ಪಕ್ಕದ ಬಂಡೆಯಲ್ಲಿ ಕೂಡ್ರುವವರು ಬ್ರಹ್ಮಚಾರಿಗಳು. ಪ್ರತ್ಯೇಕ, ಹೆಸರಿಡಬೇಕೇ? ಅದರ ಹೆಸರು ಹಾಳಾಗಬಾರದೆಂದು ಹೋಗಿ ಕೂತೆವು.

ಅದೇ ಸಮಯ ರಾಮ ಭಟ್ಟರು ಮಗಳಂದಿರನ್ನು ಕರಕೊಂಡುಬರುತ್ತಿದ್ದರು. ಕೈಯಲ್ಲಿ ಹಣ್ಣುಕಾಯಿಯ ಹರಿವಾಣವಿದ್ದುದರಿಂದ ದೇವಸ್ಥಾನಕ್ಕೆಂದು ಭಾವಿಸಿಕೊಂಡೆ.

ದೂರದಲ್ಲಿ ಬರುತ್ತಿದ್ದ ರಾಮಭಟ್ಟರನ್ನೂ ಅವಳ ಮಗಳಂದಿರನ್ನೂ, ಮಾವನಿಗೆ ತೋರಿಸಿದೆ. ಹುಡುಗಿಯರನ್ನು ನೋಡಿದೊಡನೆಯೇ ಮಾವನ ಮುಖದಲ್ಲಿ ಸ್ವಲ್ಪ ವಕ್ರಭಾವ ಮೂಡಿದಂತೆ ತೋರಿತು. ಹುಡುಗಿಯರನ್ನು ನೋಡಿದಿರಾ ಅಂದೆ? ಮಾವನ ಉತ್ತರವಿಲ್ಲ. ಮತ್ತೊಮ್ಮೆ ಕೇಳಿದೆ. ಹುಡುಗಿಯು ಕುರೂಪಿಯೆಂದು ಬಿಟ್ಟ — ನಾವ ಮಾರೀಚ. ಇಷ್ಟಾಗುವಾಗ ಘಂಟೆ ಆರಾಯಿತು. ಮನೆಯ ದಾರಿ ಹಿಡಿದೆವು.

ಮಾರಣೆಯ ದಿನ ಸುಮಾರು ಘಂಟೆ ಹನ್ನೊಂದಾಗಿರಬಹುದು. ಪೋಸ್ಟಾಫೀಸಿಗೆ ಹೋಗಬೇಕೆಂದು ಹೊರಟೆ ದಾರಿಯಲ್ಲೇ ಶನಿಯಂತೆ ರಾಮಭಟ್ಟರು ಸಿಕ್ಕಿದರು. 'ಏನು ಜಾತಕ ತೋರಿಸಿದಿರಾ? ಜಾತಕ ಸರಿಬೀಳುತ್ತದೆಯೇ? ಎಂದರು' 'ಜಾತಕ ಸರಿಯಾಗುತ್ತದೆ. ಆದರೆ.... ಮಾವ ಹುಡುಗಿ ಚಂದವಿಲ್ಲವೆಂದು ಹೇಳಿದರು' ಎಂದೆ. ರಾಮಭಟ್ಟರಿಗೆ ಕೋಪ ಬಂದಂತೆ ತೋರಿತು. 'ನಿನ್ನ ಮಾವನಿಗೆ ಒಂದು ಕನ್ನಡಿಯನ್ನು ಕೊಟ್ಟು ಅವನ ಮುಖವನ್ನು ಸರಿಯಾಗಿ ನೋಡುಕೊಳ್ಳುವಂತೆ ಹೇಳು. ಹುಡುಗಿ ಚಂದಿಲ್ಲವಂತೆ!' ಸಿಟ್ಟಿನ ಮಾತುಗಳನ್ನಾಡಿ ಹೊರಟೇ ಹೋದರು. ನನ್ನ ಮಾವನೇನೂ ಅಂಥಾ ಮನ್ಮಥನಲ್ಲ. 'ಆದರೂ ಹೀಗೂ ಹೇಳಬಹುದೇ.'

# ಪಟಾಕಿ

ಮಧ್ಯಪ್ರಾಂತ್ಯದ ಗದ್ದಲವು ದಿನಹೋದಂತೆ ಮೂಲೆಗುಂಪಾಗುವ ಬದಲಿಗೆ ಮಧ್ಯಮಧ್ಯಕ್ಕೇ ಬರಬೇಕೆ?

ss ss ss ss

ಕಾಂಗ್ರೆಸ್ ಪಾರ್ಲಿಮೆಂಟರಿ ಸಬ್ ಕಮಿಟಿಯೂ ಸರ್ದಾರ್ ಪಟೇಲರೂ ಬೇರೆ ಬೇರೆ ಹೇಳಿಕೆಗಳನ್ನಿತ್ತು ಡಾ। ಖರೆಯವರ ಅಪರಾಧಪರಂಪರೆಗಳನ್ನು ಬೆಳಕಿಗೆ ಹಾಕಿದ್ದಾರೆ.

ss ss ss ss

ಡಾ। ಖರೆಯವರು 'ಅವೆಲ್ಲಾ ಖರೆಯಲ್ಲ' ಎಂಬ ಉತ್ತರವಿತ್ತು, ಕಮಿಟಿ ಹಾಗೂ ಪಟೇಲರು ಅನ್ಯಾಯ ಮಾಡುವದರೊಡನೆ ಸುಳ್ಳಾಡುವವರು ಎಂಬ ಅರ್ಥ ಬರುವಂತೆ ಸಾರಿದ್ದಾರೆ!

ss ss ss ss

ಕಾಂಗ್ರೆಸ್ ತತ್ವ-ಕಾರ್ಯಗಳ ಪಾಲನೆಗಾಗಿ ಡಾ। ಖರೆಯವರಂತಹವ್ಯಕ್ತಿಗಳ ತೇಜೋವಧೆಯಾಗುವದಾದರೆ ಅದರಲ್ಲಿ ವ್ಯಸನವಿಲ್ಲ. ಆದರೆ ಪರಿಸ್ಥಿತಿಯು ವ್ಯಸನ ಪಡುವ ರೀತಿಗೆ ಬಂದಿದೆ.

ss ss ss ss

ಒಬ್ಬರು ಇನ್ನೊಬ್ಬರ ಮೇಲೆ ಕೋರ್ಟು ವ್ಯಾಜ್ಯಗಳ ಮಾದರಿಯ 'ಫೋರ್ಜರಿ, ಸುಳ್ಳು' ಆರೋಪಗಳನ್ನೇ ಹೊರಿಸುತ್ತಿದ್ದಾರೆ! ವಿಚಾರಣೆಯೇ ಗತಿ!

ss ss ss ss

ತಾನು ಎರಡನೆಯ ಸಲ ರಚಿಸುವ ಮಂತ್ರಿಮಂಡಲದಲ್ಲಿ ಥಾಕೂರ್ ಪ್ಯಾರಿಲಾಲ ಸಿಂಘರನ್ನು ಸೇರಿಸಿಕೊಳ್ಳುವ ಸಲುವಾಗಿ ಅವರಿಗೆ ಸರದಾರ ಪಟೇಲರ ಸಂದೇಶವೆಂದು ಡಾ। ಖರೆಯವರು ಒಂದು ಸುಳ್ಳು ಪತ್ರ ತೋರಿಸಿದರಂತೆ!

ss ss ss ss

ಪತ್ರದಲ್ಲಿ 'ಪಕ್ಷದ ನಾಯಕರ ಆಜ್ಞೆಯಂತೆ ವರ್ತಿಸಿರಿ' ಎಂದು ಬರೆದಿತ್ತು ಸರದಾರ ಪಟೇಲರು ಹಾಗೆ ಬರೆದಿದ್ದರು!

ss ss ss ss

ಬರೆದದ್ದು ಮಾತ್ರ ಈ ಸಂದರ್ಭಕ್ಕಲ್ಲ. ಹಿಂದೊಮ್ಮೆ ನಡೆದ ಮುನಿಸಿಪಲ್ ಚುನಾವಣೆಯ ಸಂದರ್ಭಕ್ಕಾಗಿ. ಖರೆಯವರು ಅದನ್ನು ಫೋರ್ಜರಿ ಮಾಡಿದಂತಾಯಿತು!

ss ss ss ss

ಪಟೇಲರು— ಕಾಗದ,-ಪರಿಸ್ಥಿತಿ-ಇವೆಲ್ಲಾ ಆಗಲೂ ಈಗಲೂ ಒಂದೇ. ಆದರೆ ಆಗ 'ನಾಯಕನನ್ನನುಸರಿಸಿ' ಎಂದು ಹೇಳಿದ್ದ ಪಟೇಲರು ಈ ಸಂದರ್ಭದಲ್ಲಿ ಹಾಗೆ ಹೇಳುವದಿಲ್ಲವಾದ್ದರಿಂದ ಖರೆಯವರದು ಇದು ಫೋರ್ಜರಿ!

ss ss ss ss

ಪಟೇಲರ 'ನಾಯಕನನ್ನನುಸರಿಸಬೇಕು' ಎಂಬ ಮಾತಿಗೆ ಈ ಸಂದರ್ಭದಲ್ಲಿ 'ಡಾ। ಖರೆಯವರು ತಮ್ಮ ನಾಯಕನಾದ ಸರದಾರ ಪಟೇಲರನ್ನು ಅನುಸರಿಸಬೇಕು' ಎಂದಿಷ್ಟೇ ಅರ್ಥ.

ss ss ss ss

ಈ ಅರ್ಥವು ತನ್ನ ಮತ್ತು ಖರೆಯವರ ಮಧ್ಯದಲ್ಲಿ ಮಾತ್ರವಿರಬೇಕೆಂದು ಸರದಾರರ ಬಯಕೆ; ಅದು ತನ್ನ ಮತ್ತು ತನ್ನ ಕೆಳ ಮಂತ್ರಿಗಳ ಮಧ್ಯದಲ್ಲಿ ಮಾತ್ರವಿರಬೇಕೆಂದು ಖರೆಯವರ ಅಪೇಕ್ಷೆ!

ss ss ss ss

ಹೀಗೆ ಎಳೆದಾಡಿಕೊಂಡುದರಿಂದ ಆ ಅರ್ಥವು ಹರಿದು ಹೋಗಿ, ಈಗ ಈ ಅನರ್ಥ!

ss ss ss ss

'ತನ್ನ ಮೇಲೆ ನಾಯಕತನವು ಒತ್ತಾಯದಿಂದ ಹೊರಿಸಲ್ಪಟ್ಟಿತು' ಎನ್ನುತ್ತಾರೆ ಖರೆಯವರು. 'ಪ್ರಯತ್ನಿಸಿ ಸ ದಿಸಿಕೊಂಡದ್ದವರು. ಆ ಮೇಲೆ ಅದನ್ನು ಬಿಡುವ ಹಲವು ಸಂದರ್ಭಗಳೊದಗಿದರೂ ಅವರು ಬಿಡಲಿಲ್ಲ' ಎನ್ನುತ್ತಾರೆ ಪಟೇಲರು.

ss ss ss ss

ನಾಯಕತ್ವವನ್ನು ಗಟ್ಟಿ ಹಿಡಿದುಕೊಳ್ಳಬೇಕೆನ್ನುವ ಹಠವು ಖರೆಯವರಲ್ಲಿದ್ದರೆ, ಅದನ್ನು ಬಿಡಿಸಬೇಕೆನ್ನುವ ಹಠವು ಸರದಾರರಲ್ಲಿತ್ತೆಂಬ ಅರ್ಥವಾಗುತ್ತದೆ. ಹೀಗೆ ಇಬ್ಬರಿಗೂ ಹಿಡಿದುಕೊಳ್ಳಲು ಸಿಕ್ಕಿದುದು ಅಧಿಕಾರ ಹೊರತು ಕಾಂಗ್ರೆಸ್ ತತ್ವವಲ್ಲ!

ss ss ss ss

ಇತ್ತಂಡದವರ ತಪ್ಪುಗಳ ಪೈಕಿ ಖರೆಯವರ ತಪ್ಪಿಗೆ ಪ್ರಾಯಶ್ಚಿತ್ತವಾಯಿತು; ಸರದಾರರ ತಪ್ಪುಗಳಿಗೆ ಕಾಂಗ್ರೆಸ್ ಶಿಸ್ತನ್ನು ಬಿಗಿಹಿಡಿಯುವ ಕಬ್ಬಿಣದ ಕಟ್ಟುಗಳ ರೂಪ ಬಂದಿದೆ!

ss ss ss ss

ಒಬ್ಬರ ಆಗ್ರಹಕ್ಕಾಗಿ ಇನ್ನೊಬ್ಬರ ತೇಜೋವಧೆಯಾದ ಚಿತ್ರವು ಮುಂದೆ ಬರುತ್ತದೆ—ಬದಲಿಗೆ ಕಾಂಗ್ರೆಸ್ ತತ್ವಗಳ ಪಾಲನೆಯ ಚಿತ್ರವು ಮುಂದೆ ಬರಬೇಕಿತ್ತು!

—ದೂಮು

# ದರ್ಜಿಗಳೇ ಎದ್ದೇಳಿರಿ!

ಜಾಗೃತ ಭಾರತದಲ್ಲಿ ಎಲ್ಲಾ ವಿಷಯಗಳಂತೆ ದರ್ಜಿ ಕೆಲಸವೂ ಪ್ರಾಮುಖ್ಯತೆಯನ್ನು ಹೊಂದುತ್ತಾ ಬರುತ್ತಿದೆ. ಶಿಕ್ಷಿತ ವರ್ಗದವರು ಬಹು ಸಂಖ್ಯೆಯಲ್ಲಿ ಈ ಕೈಗಾರಿಕೆಯನ್ನು ಮಾಡಲು ಪ್ರಾರಂಭಿಸಿದ್ದಾರೆ. ಬ್ರಿಟಿಷ್ ಆಳ್ವಿಕೆಯಿಂದಾಗಿ "ನಿರುದ್ಯೋಗ" ಎಂಬುದೊಂದು ಪ್ರಾರಂಭವಾದುದರಿಂದ ಇಷ್ಟರ ತನಕ ಅಲಕ್ಷಿಸಲ್ಪಟ್ಟ ಈ ಕಲೆಗೆ ಪ್ರಾಮುಖ್ಯತೆಯು ಸಿಗಲಾರಂಭಿಸಿತು. ಇದಕ್ಕಾಗಿ ದರ್ಜಿಗಳು ಬ್ರಿಟಿಷ್ ಸರಕಾರವನ್ನು ಅಭಿನಂದಿಸಬೇಕಾಗಿದೆ.

ಪಾಶ್ಚಾತ್ಯ ತೊಡಿಗೆಗಳ ಆಗಮನದ ಬಳಿಕ ದರ್ಜಿಗಳು ಜನ ಜೀವನದ ಒಂದಂಶವಾಗಿ ಪರಿಣಮಿಸಿದ್ದಾರೆ.

**ಸಿದ್ಧವಿರುವ ತೊಡಿಗೆ.**

ಪರದೇಶಗಳಂತೆ ನಮ್ಮ ದೇಶದಲ್ಲಿಯೂ ಅಂಗಿ ಮೊದಲಾದುವುಗಳನ್ನು ಸಿದ್ಧಮಾಡಬೇಕು. ಹೀಗೆ ಮಾಡಿದರೆ ಸಾವಿರಾರು ನಿರುದ್ಯೋಗಿಗಳಿಗೆ ಕೆಲಸವನ್ನೊದಗಿಸಿದಂತಾಗುತ್ತದೆ. ಇಷ್ಟುಮಾತ್ರವಲ್ಲ, ಹೊಲಿಗೆಯ ದರವು ಕೂಡಾ ಕಡಿಮೆಯಾದಂತಾಗಿ ಬಟ್ಟೆಗಳಿಲ್ಲದ ಬಡವರಿಗೆ ಸುಲಭ ದರದಿಂದ ಮೈಯನ್ನು ಮುಚ್ಚಿಕೊಳ್ಳಲು ಸಾಧ್ಯವಾಗುತ್ತದೆ.

**ಕಾನೂನಾಗಬೇಕು.**

ಇಂಗ್ಲೆಂಡಿನಲ್ಲಿ ೧೯೧೮ರ ಟ್ರೇಡ್ಸ್ ಬೋರ್ಡ್ ಆಕ್ಟ್ ಇರುವಂತೆಯೇ ಇಲ್ಲಿ ಕೂಡಾ ಒಂದು ಕಾಯಿದೆಯನ್ನು ಮಾಡಿದರೆ ದರ್ಜಿಗಳ ಪರಿಸ್ಥಿತಿಯನ್ನು ಸುಧಾರಿಸಿದಂತಾಗುವುದಲ್ಲದೆ ಈ ಕೈಗಾರಿಕೆಯೂ ಅಭಿವೃದ್ಧಿ ಹೊಂದಬಹುದು. ಭಾರತದ ಇತರ ಕೈಗಾರಿಕೆಗಳೊಡನೆ ಇದಕ್ಕೂ ಒಂದು ಯೋಗ್ಯಸ್ಥಾನವಿರಬಹುದು.

ತರುಣರು ಈ ಕೈಗಾರಿಕೆಯನ್ನು ಕಲಿಯುವಂತಾಗಲಿ. ಈಗಿನ ವ್ಯಾಪಾರವು ಒಂದು ಕ್ರಮಕ್ಕೆ ಬಂದು ನಿರುದ್ಯೋಗಿಗಳಿಗೂ, ಬಡವರಿಗೂ, ಕೈಗಾರಿಕೆಗೂ, ದರ್ಜಿಗಳಿಗೂ ಇದರಿಂದ ಪ್ರಯೋಜನ ಸಿಗುವಂತಾಗಲಿ.

—"ದರ್ಜಿ"

## ಪತ್ರವ್ಯವಹಾರ

[ಬಾತ್ಮಿದಾರರ ಅಭಿಪ್ರಾಯಗಳಿಗೆ ನಾವು ಜವಾಬ್ದಾರರಲ್ಲ.ಸ. ಅಂ.]

### ಬೆಳ್ತಂಗಡಿ ಪಂಚಾಯತ್ ಬೋರ್ಡು ಚುನಾವಣೆ.

**ಕಾಂಗ್ರೆಸ್ ಭಾಗವಹಿಸಲೇ ಇಲ್ಲ.**

ಬೆಳ್ತಂಗಡಿ ಕಾಂಗ್ರೆಸ್ ಕಮಿಟಿಯ ಪ್ರಾಥಮಿಕ ಸದಸ್ಯರಲ್ಲೊಬ್ಬರಾದ ಶ್ರೀ. ಯಂ. ಸಂಜೀವರಾಯರು ಪ್ರಕಟಣೆಗಾಗಿ ನಮಗೆ ಕಳುಹಿಸಿದ ಪತ್ರದಲ್ಲಿ ಹೀಗೆ ಬರೆಯುತ್ತಾರೆ:—

ಬೆಳ್ತಂಗಡಿ ಪಂಚಾಯತ್ ಬೋರ್ಡು ಚುನಾವಣೆಯಲ್ಲಿ ಕಾಂಗ್ರೆಸ್ ಭಾಗವಹಿಸದಿದ್ದರೂ, ಕಳೆದ ತಾ. ೧೯—೭—೪೮ರ ಸ್ವತಂತ್ರಭಾರತ ಸಾಪ್ತಾಹಿಕದ ಸಂಚಿಕೆಯಲ್ಲಿ, ಅಭಿರುಚಿಯಿರುವ ಅನಾಮಧೇಯರೊಬ್ಬರು 'ಕಾಂಗ್ರೆಸಿಗೆ ಜಯ' ವೆಂದಂತ್ಯವಾಗುವ ಬರೆಹವನ್ನು ಪ್ರಕಟಿಸಿದ್ದರಿಂದ, ಈ ನಿರಾಧಾರ ವಿಷಯವನ್ನು ಸಂಬಂಧಪಟ್ಟ ಕಾಂಗ್ರೆಸ್ ಅಧಿಕಾರಿಗಳು ಅಲ್ಲಗಳೆಯುವುದು ಅತ್ಯವಶ್ಯವಾಗಿದೆ.

**ತುಸು ವಿನೋದ**

ತರುಣ:—ಸ್ತ್ರೀಯರು ಒಟ್ಟುಗೂಡಿದ್ದಾಗ ಸುಮ್ಮನಿರುವುದುಂಟೇ?

ಇನ್ನೊಬ್ಬ:—ಹೌದು. ಅವರಲ್ಲಿ ಹಿರಿಯವಳು ಯಾರೆಂದು ಕೇಳಿದಾಗ.

ನನಗರಿಯದು, ನಿಮಗೆ-



ಗುಮಾಸ್ತರು
ಯಾವ ಶಾಲೆಯ ಮಾಸ್ತರು?

# ಛಾಯಾ ಲೋಕ.



## ಸಿನೆಮಾ ಮತ್ತು ಸಮಾಜ.

ಬರೆದವರು—ಶ್ರೀ. ಹಯವದನರಾಯರು

ಹಿಂದುಸ್ಥಾನವು ಎಲ್ಲಾ ವಿಚಾರಗಳಲ್ಲಿಯೂ ಪ್ರಗತಿಪಥದಲ್ಲಿ ಮುನ್ನಡೆಯುತ್ತಿದೆಯೆಂಬುದು ಇಂದಿನ ಭಾರತವನ್ನು ನೋಡಿದೊಡನೆಯೇ ಸ್ಪಷ್ಟವಾಗುತ್ತದೆ. ರಾಷ್ಟ್ರೀಯ ಧುರೀಣರು ಜನಾಭಿಪ್ರಾಯದ ಏಕೀಕರಣ ಮಾಡಲು ಶತಪ್ರಯತ್ನಗಳನ್ನು ಮಾಡುತ್ತಿರುವಾಗ ಸಿನೆಮದಂತಹ ಪ್ರಚಾರದ ಮಾಧ್ಯಮವನ್ನು ಬಿಟ್ಟು ಬಿಟ್ಟಿರುವುದು ಆಶ್ಚರ್ಯದ ಸಂಗತಿಯಿದೆ.

. . . . .

ಇತರ ರಾಷ್ಟ್ರಗಳನ್ನು ನೋಡಿದರೆ ಸಿನೆಮದ ಮೂಲಕ ರಾಜಕೀಯ ಪ್ರಚಾರವು ಯಶಸ್ವಿಯಾಗಿ ಮಾಡಲ್ಪಟ್ಟಿದೆ. ಆದರೆ ನಮ್ಮ ಇಂದಿನ ಚಿತ್ರಗಳನ್ನು ನೋಡುವಾಗ ಸಂಸ್ಕೃತಿ ಮತ್ತು ಕಲೆಗಳ ಹೆಸರಲ್ಲಿ ಜನತೆಯ ಲಕ್ಷ್ಯವನ್ನು ಆಕರ್ಷಿಸಲು ಲೈಂಗಿಕ ವಿಚಾರಗಳಿಗೆ ವಿಶೇಷ ಪ್ರಾಮುಖ್ಯತೆಯು ಕೊಡಲ್ಪಡುತ್ತಿದೆ. ಮಧ್ಯಮವರ್ಗದ ಜನರು ಮತ್ತು ಅಶಿಕ್ಷಿತ ರೈತವರ್ಗದವರು, ರಾಜಕಾರಣಕ್ಕೆ ಲಕ್ಷ್ಯವೀಯುವ ತೊಂದರೆಗೆ ಗುರಿಯಾಗುವುದಿಲ್ಲ. ಬಳಲಿ ಸಾಯುವುದೇ ತಮ್ಮ ವಿಧಿಯೆಂದು ಭಾವಿಸಿ ಸುಮ್ಮನಾಗುತ್ತಾರೆ. ಸಿರಿವಂತರಿಗೆ ತಮ್ಮ ಮತ್ತು ಇತರರ ಏಳಿಗೆಯ ದೃಷ್ಟಿಯು ಕೂಡಾ ಇರುವುದು ಅಪರೂಪವೆನ್ನಬೇಕು. ಮಧ್ಯವರ್ಗದ ಜನರು ಸಾಮಾನ್ಯವಾಗಿ ರಾಷ್ಟ್ರದ ಎಲ್ಲಾ ಚಟುವಟಿಕೆಗಳಲ್ಲಿ ಭಾಗವಹಿಸುವವರು. ಆದರೆ ಸಿನೆಮವು ಸಮಾಜಕ್ಕೆ ಉಪಕಾರ ಮಾಡುವ ಬದಲು ಮಧ್ಯತರಗತಿಯವರನ್ನು ಕೂಡಾ ಎಂತಹ ಪರಿಸ್ಥಿತಿಗೆ ತಂದೊಡ್ಡಿದೆಯೆಂದು ಯೋಚಿಸುವುದು ಪ್ರಾಮುಖ್ಯವಾಗಿದೆ.

. . . . .

ಕಲೆಗೆ ಪ್ರಾಧಾನ್ಯತೆಯನ್ನು ಕೊಟ್ಟು ಯಶಸ್ವೀ ಚಿತ್ರಗಳನ್ನು ಮಾಡಲರಿಯದ ಚಿತ್ರನಿರ್ದೇಶಕರು ತಮ್ಮ ಚಿತ್ರಗಳು ಹಣದ ದೃಷ್ಟಿಯಲ್ಲಿ ಯಶಸ್ಸುಹೊಂದಬೇಕೆಂಬ ಅಭಿಲಾಷೆಯಿಂದ ಉದ್ರೇಕಗೊಳಿಸುವ ಲೈಂಗಿಕ ದೃಶ್ಯಗಳನ್ನೋ ಅಥವಾ ಅಸ್ವಾಭಾವಿಕವಾದ ಸಾಹಸಕಾರ್ಯಗಳನ್ನೋ ತಮ್ಮ ಚಿತ್ರಗಳಲ್ಲಿ ತುಂಬಿಬಿಡುತ್ತಾರೆ. ಚಲಚಿತ್ರ ಸುಂದರಿಯರೇ ತಮ್ಮ ಆದರ್ಶ ವ್ಯಕ್ತಿಗಳೆಂದು ಅದೆಷ್ಟೋ ಯುವಕ ಯುವತಿಯರು ಭಾವಿಸಿ ಅವರ ವಿಧಾನಗಳನ್ನು ಕೆಲವೊಮ್ಮೆ ಅನುಸರಿಸುವುದುಂಟು.

. . . . .

ಚಲಚ್ಚಿತ್ರಗಳನ್ನು ನೋಡುವ



"ಧರತಿ ಮಾತಾ" ಚಿತ್ರದಲ್ಲಿ ಉಮಾ ಮತ್ತು ದುರ್ಗಾದಾಸ್ ಬ್ಯಾನರ್ಜಿ.

ದರಲ್ಲಿ ಅಗ್ರಗಣ್ಯರಾದ ತರುಣರು ಸಿನೆಮಗಳಲ್ಲಿ ಪ್ರದರ್ಶಿಸಲ್ಪಡುವ ಸಾಹಸಮಯ ಮತ್ತು ಪ್ರಣಯ ದೃಶ್ಯಗಳನ್ನು ಕಂಡು ಜೀವನದ ಇತರ ವಿಚಾರಗಳಿಗಿಂತ ಹೆಚ್ಚಿನ ಪ್ರಾಮುಖ್ಯತೆಯನ್ನು ಅದಕ್ಕೆ ಕೊಡಲಾರಂಭಿಸುತ್ತಾರೆ. ರಾಷ್ಟ್ರೋನ್ನತಿ, ಸಮಾಜೋನ್ನತಿಗಾಗಿ ಆಶಿಸುವ ತರುಣ ಹೃದಯವು ಲೈಂಗಿಕ ವಿಚಾರಮಗ್ನವಾಗುತ್ತದೆ.

. . . . .

ಹೀಗೆನ್ನುವಾಗ ಲೈಂಗಿಕ ವಿಚಾರವು ಅಲಕ್ಷ್ಯಾರ್ಹವಾದುದೆಂದು ನಾನು ಹೇಳಬಯಸುವುದಿಲ್ಲ. ಈ ವಿಚಾರವು ಸಮಾಜದ ಬೆಳವಣಿಗೆಗೆ ಪ್ರಾಮುಖ್ಯವಾದುದು. ಆದುದರಿಂದಲೇ ಅದರ ಕುರಿತು ತಪ್ಪು ಅಭಿಪ್ರಾಯಗಳು ಭಾವೀಜನಾಂಗವಾದ ಇಂದಿನ ತರುಣರಲ್ಲಿ ಉಂಟಾಗದಂತೆ ನೋಡಿಕೊಳ್ಳಬೇಕಾಗಿದೆ. ಲೈಂಗಿಕ ವಿಚಾರಗಳ ಕುರಿತು ಯೋಗ್ಯ ಸಲಹೆಯೀಯುವುದು ಅತ್ಯವಶ್ಯವಾದುದಲ್ಲದೆ ಅದು ನಮ್ಮ ಈಗಿನ ವಿದ್ಯಾಭ್ಯಾಸದಲ್ಲಿ ಸೇರದಿರುವುದು ಬೇಸರದ ಸಂಗತಿಯಾಗಿದೆ. ವಿದೇಶಗಳ ಚಿತ್ರಗಳಲ್ಲಿ ನಾವು ಪ್ರಣಯದೃಶ್ಯಗಳನ್ನು ಕಾಣುವಾಗ ಅದು ನಮ್ಮ ಜನರದಲ್ಲವೆಂದು ನಮಗನಿಸುತ್ತದೆ. ಆದರೆ ಭಾರತೀಯ ಚಿತ್ರಗಳಲ್ಲಿ ಅಂತಹ ವಿಷಮಯ ದೃಶ್ಯಗಳನ್ನು ನೋಡುವಾಗ ನಮ್ಮ ನಾಡಿನ ಪದ್ಧತಿಗಳ ನೆನಪು ನಮಗಾಗುತ್ತದೆ.

. . . .

ಆದುದರಿಂದ ನಮ್ಮ ಇಂದಿನ ಪರಿಸ್ಥಿತಿಯಲ್ಲಿ ಈ ವಿಷಯಕ್ಕೆ ಹೆಚ್ಚಿನ ಪ್ರಾಮುಖ್ಯತೆ ಕೊಡಲು ಬಿಟ್ಟರೆ ಮುಂದಿನ ಜನಾಂಗವನ್ನು ನಮ್ಮ ಅಲಕ್ಷ್ಯದಿಂದ ಕೆಡಿಸಿದಂತಾಗುತ್ತದೆ. ಯಾವ ಸಿನೆಮವು ಇಂದಿನ ಸಮಾಜಕ್ಕೆ ಹಾನಿಕಾರಕವಾಗಿದೆಯೋ ಅದನ್ನು ಸಮಾಜದ ಅಮೃತವಾಹಿನಿಯಾಗಿ ಮಾಡಲು ಶಕ್ಯವಿದೆ.

. . . . .



ಫೋಕ್ಸ್ ಕಂಪೆನಿಯ ‘ದಿ ಮರ್‌ಮೈಡ್ ಕವ್ಸ್’ ಎಂಬ ಚಿತ್ರದಲ್ಲಿ ಎನ್ನಾ ಕೆರೆಲ್

—ಜನತೆಯು ಯಾವಾಗಲೂ ಜನತೆಯೇ ಎಂದು-ಹೇಳುವುದೊಂದು ವಾಡಿಕೆ. ಹಾಗೆಂದು ಜನತೆಗೆ ಹಾನಿಕರವಾದುದನ್ನು ಕೊಟ್ಟರೆ ಅದರ ಪರಿಸ್ಥಿತಿಯು ಮತ್ತಷ್ಟೂ ಕೆಟ್ಟು ಹೋಗಬಹುದು. ಈಗಿನ ಚಿತ್ರಗಳ ಕಥೆಗಳಲ್ಲಿ ಪ್ರಣಯ ಪ್ರಸಂಗಕ್ಕೆ ಪ್ರಾಮುಖ್ಯತೆಯು ಇದ್ದೇ ಇದೆ.

. . . . .

ರಾಷ್ಟ್ರಪ್ರೇಮವನ್ನು ಉಂಟು ಮಾಡುವ ಚಿತ್ರಗಳನ್ನು ತಯಾ[illegible]ಸುವುದಕ್ಕೆ ಈಗಿನ ಅವಸರವಿರುವುದಿದ್ದರೂ, ಧ್ಯೇ[illegible] ಸಮಾಜಸೇವೆ ಮೊದಲಾ[illegible]ಳನ್ನು ತೋರಿಸುವ ಚಿತ್ರ[illegible] ತಯಾರಿಸಬಹುದು. ಪ್ರಾ[illegible] ನಮ್ಮ ಜನರು, ಪ್ರಣಯ[illegible]ಳನ್ನು ಹುಚ್ಚನಂತೆ ಹಾಡು[illegible]ಗಿಂತ ಒಬ್ಬ ಧೀರನನ್ನು, ಆ[illegible] ಸಮಾಜ ಸೇವಕನನ್ನು, ನುಚ್ಚ[illegible]ಬಹುದು. ಚಲಚ್ಚಿತ್ರಗಳು ಹಲವು ಸಾಮಾಜಿಕ ಸಮಸ್ಯೆಗಳನ್ನು ಬಗೆಹರಿಸುವ ವಿಧಾನವನ್ನು ತೋರಿಸಬಹುದು.

ಈಗ ಚಿತ್ರಗಳು ವಿನೋದಾತ್ಮಕವಾಗಿವೆಯೋ ಎಂಬುದನ್ನು ನೋಡುವುದಲ್ಲದೆ ಅದರಿಂದ ಸಮಾಜಕ್ಕೆ ಯಾವ ಪ್ರಯೋಜನವಿದೆಯೆಂಬುದನ್ನು ಯಾರೂ ಲೆಕ್ಕಿಸುವುದಿಲ್ಲ.

———

Printed and published by P. Venkataramanacharya for and on behalf ... AGENCY LTD
at Manipal Power Press, Udipi

| ಶ್ರಾವಣ ಮಾಸ | # ಹಬ್ಬಗಳ ಸುಗ್ಗಿ | ಸೋಣ ತಿಂಗಳು |
|---|---|---|

ಈ ಅಪೂರ್ವ ಸಂದರ್ಭದ ಲಾಭದಾಯಕ
ವ್ಯಾಪಾರವನ್ನು ಬಿಡಬೇಡಿರಿ.

| ನಿಮ್ಮ ಹಣಕ್ಕೆ ತಕ್ಕ ಮಾಲು | ತಾ. 28—7—38ರಿಂದ<br>ತಾ. 16—9—38ರ ವರೆಗೆ | ಅನೇಕ ತರದ ಇನಾಮುಗಳು |
|---|---|---|

## ❖ ಕೇವಲ 51 ದಿನಗಳು ❖

ಶ್ರಾವಣ ಮಾಸ ಮತ್ತು ಸೋಣ ತಿಂಗಳ ಹಬ್ಬಗಳಲ್ಲಿ

# ಊದು ಬತ್ತಿಗಳು

ಎಲ್ಲರಿಂದಲೂ ಉಪಯೋಗಿಸಲ್ಪಡುತ್ತವೆ. ಅಂದ ಮೇಲೆ
ನಮ್ಮ ಈ ಹೊಸ ಯೋಜನೆಯನ್ನು ಪ್ರತಿಯೊಬ್ಬರೂ ಉಪಯೋಗಿಸಿರಿ.




**ಒಂದಾಣೆ ಊದುಬತ್ತಿ ವ್ಯಾಪಾರಕ್ಕೊಂದರಂತೆ
ಲಕ್ಕಿ ಟಿಕೇಟುಗಳು ಕೊಡಲ್ಪಡುತ್ತವೆ.
ತಾ. 25-9-38ರಲ್ಲಿ ಆ ಟಿಕೇಟುಗಳಿಗೆ**

**101**




## ಇನಾಮುಗಳು ಹಂಚಲ್ಪಡುವವು.

**ಇನಾಮು ಇರುವ ನಂಬರದ ಟಿಕೇಟಿನವರು 15-10-38ರ ಒಳಗೆ
ಇನಾಮುಗಳನ್ನು ಪಡಕೊಳ್ಳಬೇಕು. ಆ ಮೇಲೆ ದೊರೆಯಲಾರದು.**



# ಸುವಾಸಿನಿ ಊದುಬತ್ತಿಗಳ

(*Regd.*)



**ಎರಡಾಣೆ ಪಾಕೇಟ್ ಪಡಕೊಳ್ಳುವವರಿಗೆ ಕೂಡಲೇ ಯಾವುದಾದರೊಂದು
ಇನಾಮು ಕೊಡಲ್ಪಡುತ್ತದೆ. ಇವರಿಗೆ ಪ್ರತ್ಯೇಕ ಲಕ್ಕಿ ಟಿಕೇಟು ಇಲ್ಲ.**

**ಊದುಬತ್ತಿ ವ್ಯಾಪಾರದಲ್ಲಿ ಅನೇಕ ವರ್ಷಗಳ ಅನುಭವವುಳ್ಳ ನಮ್ಮ**

## ಶ್ರೀ ಭಾರತ ವಸ್ತುಮಂದಿರ ತೇರಬೀದಿ ಉಡುಪಿ

**ಇಲ್ಲಿಂದಲೇ ನಿಮಗೆ ಬೇಕಾದ ಊದುಬತ್ತಿಗಳನ್ನು ಪಡಕೊಳ್ಳಿರಿ.**

**ಏಜನ್ಸಿ ಲಿಮಿಟೆಡ್
ಉಡುಪಿ.**

**S. U. Paniady,
ಮೆನೇಜಿಂಗ್ ಡೈರೆಕ್ಟರ್.**

**page is available for advertisement. Rate Rs. 15. (per insertion).**

# THULUNAD TILAKA PANCHANGAM

*Some Reasons*
*Why it is paying*
*to advertise in it*

BECAUSE it is the one almanac that has a widest circulation througout Karnataka being very cheap and yet carefully and most accurately calculated.

BECAUSE every Hindu who buys it refers to it almost every day throughout the year and reserves it for future reference.

AND yet the rates are comparatively modest although your advertisement will be permanently and constantly under the eye of the public and hence you reap the maximum tage.

ADVERTISEMENTS can be printed in English, Hindi, Marathi, Kanarese Tulu, Tamil, Telugu and Malayalam Languages and hence the range of their reach is widened all the more

PROMINENT and great institutions are advertising in the almanac which is a clean proof of the use of an advertisement in the Thulunad Tilaka Panchangam.

ADVERTISEMENT MANAGER,
**SUPPLY AGENCY LTD.,**
**UDIPI.**

**ತುಳುನಾಡ್ ತಿಲಕ ಪಂಚಾಂಗದಲ್ಲಿಯೇ ಜಾಹಿರಾತು ಕೊಡಿರಿ.**

This page is available for Advertisement. Rate Rs. 20/- (per insertion)